# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಕಾರಿ ವರ್ಗ

| | |
|---|---|
| ಟಿ. ರಾಜಣ್ಣ | ಕಾರ್ಯದರ್ಶಿ |
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರ್‌ರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| ಅನಸೂಯ ಎನ್. ದೇವಗಿರಿ | ಸಹಾಯಕ ಗ್ರಂಥಪಾಲಕಿ |

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಕೆ. ಜಯಶಂಕರ ಮೂರ್ತಿ | ಕಾರ್ಯದರ್ಶಿ(ಪ್ರ) |
| ವಿ. ಶ್ರೀಶ್ | ಸಭಾಪತಿಯವರ ಕಾರ್ಯದರ್ಶಿ |

### ಸಂಪಾದಕರು

ಎಲ್.ಎಸ್. ಮುಕುಂದರಾಜ್, ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ವಿಧಾನ ಮಂಡಲ ಗ್ರಂಥಾಲಯ ಸಮಿತಿ

## 2004 – 2005

---

**ಅಧ್ಯಕ್ಷರು**

**ವಿ.ಆರ್. ಸುದರ್ಶನ್**

ಸಭಾಪತಿಗಳು,

ಕರ್ನಾಟಕ ವಿಧಾನ ಪರಿಷತ್ತು

**ಸದಸ್ಯರು**

**ಕೃಷ್ಣ**

ಸಭಾಧ್ಯಕ್ಷರು,

ಕರ್ನಾಟಕ ವಿಧಾನ ಸಭೆ

**ವಿಶ್ವನಾಥ್ ಪಾಟೀಲ್ ಹೆಬ್ಬಾಳ್**

ವಿಧಾನ ಸಭಾ ಸದಸ್ಯರು ಹಾಗೂ

ಉಪ ಸಮಿತಿಯ ಅಧ್ಯಕ್ಷರು

**ಜಿ.ಎಸ್. ಗಡ್ಡದೇವರ ಮಠ**

ವಿಧಾನ ಸಭಾ ಸದಸ್ಯರು

**ಆರ್. ಧ್ರುವನಾರಾಯಣ್**

ವಿಧಾನ ಸಭಾ ಸದಸ್ಯರು

**ಕಳಕಪ್ಪ ಜಿ. ಬಂಡಿ**

ವಿಧಾನ ಸಭಾ ಸದಸ್ಯರು

**ಡಾ॥ ವೀರಬಸವಂತರೆಡ್ಡಿ ಮುದ್ನಾಳ್**

ವಿಧಾನ ಸಭಾ ಸದಸ್ಯರು

**ಡಾ॥ ವಿ.ಎಸ್. ಆಚಾರ್ಯ (ದಿನಾಂಕ 26.11.04ರವರೆಗೆ)**

ವಿಧಾನ ಪರಿಷತ್ತಿನ ಸದಸ್ಯರು

**ಡಾ॥ ಎಲ್. ಹನುಮಂತಯ್ಯ (ದಿನಾಂಕ 26.11.04ರವರೆಗೆ)**

ವಿಧಾನ ಪರಿಷತ್ತಿನ ಸದಸ್ಯರು

**ಡಾ॥ ಚಂದ್ರಶೇಖರ ಬಿ. ಕಂಬಾರ**

ವಿಧಾನ ಪರಿಷತ್ತಿನ ಸದಸ್ಯರು

**ವಿಠಲ ಹೆರೂರು (ದಿನಾಂಕ 26.11.04 ರಿಂದ)**

ವಿಧಾನ ಪರಿಷತ್ತಿನ ಸದಸ್ಯರು

**ಖಾಜ್ಹಿ ಅರಶದ ಅಲಿ (ದಿನಾಂಕ 26.11.04ರಿಂದ)**

ವಿಧಾನ ಪರಿಷತ್ತಿನ ಸದಸ್ಯರು

**S.C. MALLAYYA:** (Eminent Parliamentarian Series) Written by **DR.T.C. POORNIMA**, Published by Karnataka Legislature Library Committee, Vidhana Soudha, Bangalore-560 001.

Pages - xiii+200
Rupees - 20/-



First Edition- March, 2005
Number of Copies : 2,000

Printed and Designed by :
Government Printing Press,
Bangalore- 560 001.

**ಎಸ್.ಸಿ. ಮಲ್ಲಯ್ಯ**
ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ
ಲೇಖಕರು : **ಡಾ. ಟಿ.ಸಿ. ಪೂರ್ಣಿಮಾ**
ಪ್ರಕಟಣೆ : ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ,
ವಿಧಾನ ಸೌಧ, ಬೆಂಗಳೂರು.

ಬೆಲೆ ರೂ : 20

ಪುಟ ಸಂಖ್ಯೆ : 200 + xiii



ಮೊದಲನೆ ಮುದ್ರಣ : ಮಾರ್ಚ್, 2005

ಪ್ರತಿಗಳು : 2,000

ಮುಖ ಪುಟ ವಿನ್ಯಾಸ ಮತ್ತು ಮುದ್ರಣ:

ಸರ್ಕಾರಿ ಮುದ್ರಣಾಲಯ, ಬೆಂಗಳೂರು -560 001

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ

# ಎಸ್.ಸಿ. ಮಲ್ಲಯ್ಯ

**ಡಾ. ಟಿ. ಸಿ. ಪೂರ್ಣಿಮಾ**

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ

ವಿಧಾನಸೌಧ, ಬೆಂಗಳೂರು 560 001

# ಮುನ್ನುಡಿ

ದೇಶದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಕಿರುಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಹಾಗೂ ಇನ್ನು ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಈಗ ಡಾ|| ಟಿ.ಸಿ. ಪೂರ್ಣಿಮಾ ಇವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಎಸ್.ಸಿ. ಮಲ್ಲಯ್ಯನವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೂ ಹಾಗು ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

**ವಿ.ಆರ್. ಸುದರ್ಶನ್**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೃಷ್ಣ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

**ಬೆಂಗಳೂರು**
30 ನೇ ಮಾರ್ಚ್ 2005

# ಲೇಖಕರ ಮಾತು

ಆ ಕಾಲ ಸಂದರ್ಭವೇ ಹಾಗಿತ್ತು. ಸ್ವಾತಂತ್ರ್ಯ ಪೂರ್ವ ಕಾಲ, ಬ್ರಿಟಿಷರ ಕಪಿಮುಷ್ಠಿಯಲ್ಲಿ ನಾಡು ನಲುಗಿಹೋಗಿತ್ತು. ಮೈಸೂರು ರಾಜ್ಯದಲ್ಲಿ ರಾಜಾಡಳಿತವಿದ್ದರೂ ಬ್ರಿಟಿಷರ ಹೇಳಿಕೆ ಕೇಳಿಕೆಯನ್ವಯವೇ ನಡೆಯುತ್ತಿತ್ತು. ಆ ದಿನಗಳಲ್ಲಿ ವಿದೇಶಿ ಮಾರ್ಗದರ್ಶನಕ್ಕೆ ಬದಲಿಯಾಗಿ ದೇಸೀಯವಾದ ಪಥವೊಂದನ್ನು ರಚಿಸಿಕೊಳ್ಳುವ ನಿಟ್ಟಿನಲ್ಲಿ ಮೈಸೂರಿನವರು ಮುಂದಾದಾಗ ಹಲವಾರು ರೈತರು, ವರ್ತಕರು, ನಾಗರಿಕರು ಅವರ ಜೊತೆ ಸೇರಿದರು. ಅಂತಹ ಪ್ರಮುಖರ ಪೈಕಿ ಪ್ರಮುಖವಾಗಿ ಕಾಣುವ ಹೆಸರೇ ಎಸ್.ಸಿ. ಮಲ್ಲಯ್ಯ.

ರಾಜಾಶ್ರಯದಲ್ಲೇ ನಡೆಯುತ್ತಿದ್ದ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರಾಗಿ ಮಲ್ಲಯ್ಯನವರು ಕ್ರಮಿಸಿದ ಹಾದಿಯಲ್ಲೇನೂ ನಡೆಮುಡಿ ಹಾಸಿರಲಿಲ್ಲ. ಇನ್ನೂ ವಿಕಾಸವೆಂದರೇನೆಂದೂ ಅರಿಯದಿದ್ದ ಸಮಾಜದಲ್ಲಿ ಪ್ರಗತಿಪರ ಸಾಗರದಲ್ಲಿ ಈಜುವ ಸಾಹಸ ಮಾಡಲಾಗಿತ್ತು.'ಮಕ್ಕಳನ್ನು ರುಜುಮಾಡುವ ಸ್ಥಿತಿಯಲ್ಲೇ ನಿಲ್ಲಿಸಿ ಬಿಡಬೇಡಿ' ಎಂದು ಒಂದು ವ್ಯವಸ್ಥೆಯನ್ನು ಎಚ್ಚರಿಸುವುದು ಅಂದಿನ ಮಟ್ಟಿಗೆ ಸುಲಭದ ಕೆಲಸವಾಗಿರಲಿಲ್ಲ. 'ಹರಾಜಿಗೆ ಬಡವರ ಜಮೀನೇ ಆಗಬೇಕೇನು ?' ಎಂದು ಉಳ್ಳವರನ್ನೇ ನೇರವಾಗಿ ಪ್ರಶ್ನಿಸುವ ತಾಕತ್ತು ಹೊಂದಿದ್ದರು. ಹಿಂದುಳಿದ ವರ್ಗದವರ ಆಶೋತ್ತರಗಳನ್ನು ಪೋಷಿಸುತ್ತಾ 'ಮದ್ರಾಸಿನ ಕಾನೂನು ಮೈಸೂರಿಗೇಕೆ ಬೇಡ ?', 'ಪ್ರತಿ ಪ್ರಜೆಗೂ ಅನ್ನ ಬಟ್ಟೆ ವಿದ್ಯೆ ವೈದ್ಯಬೇಕು' ಎಂದು ಪ್ರಗತಿಯ ಪ್ರತಿ ಹೆಜ್ಜೆಯನ್ನು ಅವರು ನಿಗದಿ ಮಾಡಿಕೊಟ್ಟಿದ್ದರು. ಈ ಕಾರಣಗಳಿಂದಾಗಿಯೇ ಮಲ್ಲಯ್ಯನವರ ಪ್ರತಿಯೊಂದು ಚಿಂತನೆಯೂ ಬಂಡಾಯ ಸ್ವರೂಪವನ್ನೂ ಪ್ರಗತಿಗಾಮಿತನವನ್ನೂ ಪ್ರದರ್ಶಿಸುತ್ತದೆ.

ಮಲ್ಲಯ್ಯನವರ ಅನಿಸಿಕೆ ಸಾರ್ವಕಾಲಿಕವೆಂದು ಕರೆಯುವುದು ಇದೇ ಕಾರಣಕ್ಕೆ. ಮುನ್ನಡೆಯನ್ನೇ ಗುರಿಯಾಗಿಸಿಕೊಂಡವರಿಗೆ ಅವರ ನುಡಿಗಳು ದೂರದ ದೀಪಸ್ತಂಭದಂತೆ ಬೆಳಕು ತೋರುತ್ತವೆ. ಅಂತಹ ನೂರಾರು ಕಿರಣಗಳನ್ನು ಹಿಡಿದಿಡುವ ಕೆಲಸ ಇಲ್ಲಿ ನಡೆದಿದೆ. ನಿಷ್ಠೆಯಿಂದ ಕಾರ್ಯ ನಿರ್ವಹಿಸಿದ್ದೇನೆ.

ಮೂರು ತಲೆಮಾರುಗಳ ಹಿಂದಿನ ರಾಜಕೀಯ ಪಟು ಎಸ್.ಸಿ. ಮಲ್ಲಯ್ಯನವರನ್ನು ಕುರಿತು ಈ ಪುಸ್ತಕ ರಚನೆಯ ಹೊಣೆಯನ್ನು ವಹಿಸಿಕೊಟ್ಟಾಗ ನಾನು, ಮಲ್ಲಯ್ಯನವರ ಮಗ, ಅಂದಿನ ಮುಖ್ಯಮಂತ್ರಿ ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರ ವಿಶೇಷಾಧಿಕಾರಿಯಾಗಿದ್ದೆ. ಆದ್ದರಿಂದಲೇ ಸ್ವಾತಂತ್ರ ಪೂರ್ವ ಸಂದರ್ಭದಲ್ಲಿ ಕಾಲು ಶತಮಾನಕ್ಕೂ ಹೆಚ್ಚು ಕಾಲ ಜನಪ್ರತಿನಿಧಿಯಾಗಿ ಶ್ರಮದಾನ ಮಾಡಿದ್ದ ಮಲ್ಲಯ್ಯನವರ ವಿಚಾರಧಾರೆಯನ್ನು ಕ್ರೋಢೀಕರಿಸುವುದು ಸ್ವಲ್ಪಮಟ್ಟಿಗೆ ಹಗುರವಾಯಿತು. ಈ ಸಂಶೋಧನೋಪಾದಿಯ ಕೆಲಸಕ್ಕೆ ನನ್ನನ್ನು ಪ್ರೋತ್ಸಾಹಿಸಿ, ಹರಸಿದ, ಪ್ರಸ್ತುತ, ಮಹಾರಾಷ್ಟ್ರದ

ಘನತೆವೆತ್ತ ರಾಜ್ಯಪಾಲರಾದ ಮಾನ್ಯ ಶ್ರೀ ಎಸ್.ಎಂ. ಕೃಷ್ಣರವರಿಗೂ, ಮೇಡಂ ಶ್ರೀಮತಿ ಪ್ರೇಮಾ ಕೃಷ್ಣ ಅವರಿಗೂ ಮತ್ತವರ ಕುಟುಂಬ ವರ್ಗಕ್ಕೂ ತುಂಬು ಮನದಿಂದ ಕೃತಜ್ಞತೆ ಸಲ್ಲಿಸುತ್ತೇನೆ.

ಈ ಪುಸ್ತಕದ ಕೆಲಸವೇನೋ ಶ್ರೀ ಕೃಷ್ಣ ಅವರು ನಮ್ಮ ಮುಖ್ಯಮಂತ್ರಿಯಾರಾಗಿದ್ದ ಕಾಲದಲ್ಲೇ ಪೂರ್ಣಗೊಂಡಿತ್ತು. ಆದರೀಗ ಪುಸ್ತಕ ಪ್ರಕಟಗೊಳ್ಳುತ್ತಿರುವ ಸಂದರ್ಭದಲ್ಲಿ ಹಿರಿಯ ರಾಜಕಾರಣಿ ಮಾನ್ಯ ಶ್ರೀ ಧರಂಸಿಂಗ್ ಅವರು ನಮ್ಮ ಮುಖ್ಯಮಂತ್ರಿಯಾಗಿದ್ದಾರೆ. ಈಗಲೂ ನಾನು ಮುಖ್ಯಮಂತ್ರಿಯವರ ವಿಶೇಷಾಧಿಕಾರಿಯೇ. ವೃತ್ತಿಯ ಜೊತೆ ಜೊತೆಗೆ ನಾನು ಬೆಳೆಸಿಕೊಂಡಿರುವ ಸಾಹಿತ್ಯ ಚಟುವಟಿಕೆಗಳಿಗೂ ಉತ್ತೇಜನ ನೀಡುತ್ತಿರುವ ಮಾನ್ಯ ಮುಖ್ಯಮಂತ್ರಿಯವರಿಗೂ, ಅವರ ಪತ್ನಿ ಶ್ರೀಮತಿ ಪ್ರಭಾವತಿ ಮೇಡಂ ಅವರಿಗೂ ಕುಟುಂಬ ವರ್ಗಕ್ಕೂ ನಾನು ಕೃತಜ್ಞನಾಗಿದ್ದೇನೆ.

ಸಿದ್ಧಗೊಂಡು ಒಂದೂವರೆ ವರ್ಷ ಕಳೆದರೂ ಬೆಳಕಿಗೆ ಬರಲು ತಡ ಮಾಡುತ್ತಿದ್ದ ಈ ಕೃತಿಯನ್ನು ಈಗ ಬಿಡುಗಡೆ ಮಾಡಲೇಬೇಕೆಂದು ಪಣತೊಟ್ಟವರು ವಿಧಾನ ಪರಿಷತ್ತಿನ ಸಭಾಪತಿಗಳಾದ ಮಾನ್ಯ ಶ್ರೀ ವಿ.ಆರ್. ಸುದರ್ಶನ್ ಅವರು. ಅವರ ಒತ್ತಾಯದ ಫಲವಾಗಿ ಈ ಪುಸ್ತಕಕ್ಕೆ ಅಂತಿಮ ಸ್ಪರ್ಶ ನೀಡುವ ಕೆಲಸವನ್ನು ಕಳೆದೊಂದು ವಾರದಿಂದ ಅಹೋರಾತ್ರಿ ಮಾಡಿದ್ದೇನೆ. ಹಾಗಾಗಿ ಈ ಪುಸ್ತಕ ಹೊರಬಂದಿದ್ದರ ಕೀರ್ತಿ ಸಭಾಪತಿಯವರಿಗೆ ಸಲ್ಲಬೇಕು. ಅವರಿಗೂ, ವಿಧಾನ ಸಭೆಯ ಅಧ್ಯಕ್ಷರಾದ ಮಾನ್ಯ ಶ್ರೀ ಕೃಷ್ಣ ಅವರಿಗೂ ನನ್ನ ವಿನಮ್ರ ಕೃತಜ್ಞತೆಗಳು.

ಮಲ್ಲಯ್ಯನವರ ಬಗ್ಗೆ ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ನೀಡಿದವರ ಪೈಕಿ ಶತಾಯುಷಿ ದಿ. ನಿಟ್ಟೂರು ಶ್ರೀನಿವಾಸರಾಯರು ಪುಸ್ತಕ ಸ್ವರೂಪದಲ್ಲಿ ಇದನ್ನು ನೋಡದೆ ಕಣ್ಮರೆಯಾಗಿದ್ದಾರೆ. ಈ ಕಾರಣಕ್ಕಾಗಿ ವಿಷಾದ ವ್ಯಕ್ತಪಡಿಸುತ್ತಾ, ಅವರಿಗೂ, ಇತರ ಗಣ್ಯರಾದ ಶ್ರೀಮತಿ ಅಮ್ಮಯ್ಯಮ್ಮ, ಪ್ರೊ. ದೇಜಗೌ, ಶ್ರೀ ಜಿ. ನಾರಾಯಣ ಹಾಗೂ ಡಾ. ಅರ್ಜುನಪುರಿ ಅಪ್ಪಾಜಿಗೌಡ ಅವರಿಗೂ ನನ್ನ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಗ್ರಂಥಾಲಯ ಉಪಸಮಿತಿಯ ಅಧ್ಯಕ್ಷರಾದ ಶ್ರೀ ವಿಶ್ವನಾಥ್ ಪಾಟೀಲ್ ಹೆಬ್ಬಾಳ ಮತ್ತಿತರ ಎಲ್ಲ ಸದಸ್ಯರೂ ಈ ಪುಸ್ತಕದ ವಿಚಾರದಲ್ಲಿ ಅತೀವ ಆಸಕ್ತಿ ತಳೆದು ಇದರ ಪ್ರಕಟಣೆಗೆ ಕಾರಣರಾಗಿದ್ದಾರೆ. ಅದರಲ್ಲೂ ಉಪ ಸಮಿತಿಯ ಸದಸ್ಯರಾದ, ಖ್ಯಾತ ಸಾಹಿತಿ ಡಾ. ಚಂದ್ರಶೇಖರ ಕಂಬಾರರು ಸಾಹಿತಿಗಳ ಸೃಜನ ಶಕ್ತಿಯನ್ನು ಬಳಸಿಕೊಳ್ಳುವಲ್ಲಿ ಸರ್ಕಾರಿ ಪ್ರಕಟಣೆಗಳು ವಿಫಲವಾಗುತ್ತಿರುವುದನ್ನು ಸಮಿತಿಯ ಗಮನಕ್ಕೆ ತಂದು ಇದನ್ನು ಸುಧಾರಿಸುವ ಸಾಹಸ ಮಾಡಿದ್ದಾರೆ. ಇಂಥ ನಿಯಮ ನಿಬಂಧನೆಗಳು ಪ್ರಕಟಿತ ಪುಸ್ತಕಗಳ ಮುಖಮೌಲ್ಯವನ್ನೇ ಮುಸುಕು ಮಾಡಿಬಿಡುತ್ತವೆಯಾದ್ದರಿಂದ ಅವನ್ನು ಸ್ವಲ್ಪವಾದರೂ ಸಡಿಲಿಸಬೇಕಾದ ಅಗತ್ಯ ಖಂಡಿತ ಇದೆ ಎಂದು ಪ್ರತಿಪಾದಿಸಿದ್ದಾರೆ. ಪ್ರಸ್ತುತ ಅಂಥ ಸಡಿಲಿಕೆಯೇನೂ ಆಗಿರದಿದ್ದರೂ ಧೈರ್ಯ ಮಾಡಿ ನಾನೂ ಸ್ವಲ್ಪ ಸ್ವಾತಂತ್ರ್ಯ ತೆಗೆದುಕೊಂಡು, ಸ್ವಲ್ಪ ಮಟ್ಟಿಗೆ ಕಡೆಗಳಿಗೆಯ ಕಸರತ್ತು ನಡೆಸಿ ಪುಸ್ತಕಕ್ಕೊಂದಿಷ್ಟು ಅಲಂಕಾರ ಮಾಡಿದ್ದೇನೆ. ಆದರಿಷ್ಟೇ ಅಲ್ಲ, ವರ್ಣರಂಜಿತ ರಾಜಕೀಯ ನಾಯಕರನ್ನು ಕುರಿತು ಬರೆಯುವಾಗ ಮೌಲ್ಯವರ್ಧನೆಯ ಸಾಧ್ಯತೆ ಇನ್ನೂ ಇದೆ, ಮುಂದೆ ಅದಕ್ಕೂ ಅವಕಾಶವಾಗಲಿ ಎಂದು ಆಶಿಸುತ್ತೇನೆ.

ಈ ಮಾಲಿಕೆಯ ಹಲವು ಕೃತಿಗಳನ್ನು ಮುದ್ರಣಕ್ಕೆ ಸಿದ್ಧಗೊಳಿಸಬೇಕಾದ ಹೊಣೆಗಾರಿಕೆ ವಹಿಸಿಕೊಂಡ ಪ್ರಸಿದ್ಧ ಕವಿ, ಪ್ರೊ. ಎಲ್.ಎನ್. ಮುಕುಂದರಾಜ್ ಅವರ ಸೃಜನ ಸಾಮರ್ಥ್ಯವೂ ಈ ಪ್ರಕಟಣೆಗಳಿಗೆ ಸಿಕ್ಕಿದ್ದು ಸಂತಸದ ವಿಷಯ. ಪುಸ್ತಕಗಳು ಪ್ರಕಟಣೆಗೆ ಸಜ್ಜಾಗುತ್ತಿದ್ದ ಕಡೆ ಕಡೆಯ ಗಳಿಕೆಯಲ್ಲಿ ಸೇರ್ಪಡೆಗೊಂಡರೂ ಅವರು ಕರಡನ್ನೂ ತಿದ್ದಿ ಉತ್ತಮ ಸಹಕಾರ ನೀಡಿದ್ದಾರೆ, ಅವರಿಗೂ ಅವರ ಸಹಾಯಕ್ಕೆ ನಿಂತ ಶ್ರೀ ಅಶೋಕ್ ನರಗುಂದ ಅವರಿಗೂ ನನ್ನ ಅನನ್ಯ ವಂದನೆಗಳು.

ಅಂದ ಹಾಗೆ, ಮಲ್ಲಯ್ಯನವರ ಉತ್ಕೃಷ್ಟ ಭಾಷಣಗಳ ಸಂಗ್ರಹದಂಥ ಈ ಕೃತಿಯನ್ನು ಹೊರತರುವ ಬಗ್ಗೆ ತಿಳಿಸಿದಾಗ ಅನೇಕರು ತಮ್ಮ ಬೆಂಬಲ ಸೂಚಿಸಿ ಪ್ರೇರೇಪಿಸಿದ್ದಾರೆ. ತಮಗೆ ತಿಳಿದ ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಪ್ರೊ. ಟಿ. ಶಿವಣ್ಣ, ಶ್ರೀ ಎಸ್.ಎಂ. ಶಂಕರ್, ಶ್ರೀ ಹೆಚ್.ಕೆ. ಚಿಂದಯ್ಯ, ಡಾ. ಹೊ. ಶ್ರೀನಿವಾಸಯ್ಯ, ಶ್ರೀ ಎಂ.ಎಲ್. ಚಂದ್ರಶೇಖರ್, ಶ್ರೀ ಕರಡಣ್ಣಯ್ಯ, ದಿ. ಕೆ.ಎಂ. ರುದ್ರಪ್ಪ, ಶ್ರೀ ಕೆ.ಟಿ. ಚಂದು, ಶ್ರೀ ಬಿ.ಆರ್. ಶ್ರೀನಿವಾಸಮೂರ್ತಿ, ಡಾ. ಕೆ. ರಮೇಶ್, ಡಾ. ಶಶಿಧರ್ ಪ್ರಸಾದ್, ಶ್ರೀ ಮನು ಬಳಿಗಾರ್ ಇವರೆಲ್ಲರು ಮಾಹಿತಿ ನೀಡಿ ಸಹಕರಿಸಿದ್ದಾರೆ.

ಹಿಂದಿನ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ ಶ್ರೀ ಕೆ. ಜೈರಾಜ್, ಕಾರ್ಯದರ್ಶಿ ಶ್ರೀ ಎಂ.ಕೆ. ಶಂಕರಲಿಂಗೇಗೌಡ, ವಿಶೇಷಾಧಿಕಾರಿ ಶ್ರೀ ಎಂ.ಆರ್. ಸೋಮಶೇಖರಪ್ಪ ಹಾಗೂ ಹಾಲಿ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ ಶ್ರೀ ಎಸ್.ವಿ.ರಂಗನಾಥ್, ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ ಶ್ರೀ ಬಿ.ಎನ್. ಕೃಷ್ಣಯ್ಯ ಇವರೂ ಕೂಡ ವಿಶೇಷ ಆಸ್ಥೆ ತೋರಿದ್ದಾರೆ. ಇವರೆಲ್ಲರಿಗೂ ನಾನು ಆಭಾರಿ. ಸಹೋದ್ಯೋಗಿಗಳಾದ ಶ್ರೀಮತಿ ಬಿ.ಬಿ. ವೀಣಾ, ಶ್ರೀ ಉಮೇಶ್ ಹಾಗೂ ಶ್ರೀ ರಾಜೇಶ್ ಅವರಿಂದ ಪಡೆದ ನೆರವಿಗೂ ವಂದನೆಗಳು.

ರಾಜ್ಯ ಪತ್ರಾಗಾರ ಇಲಾಖೆ, ವಿಧಾನ ಮಂಡಲ ಸಚಿವಾಲಯದ ಸಂಶೋಧನಾ ವಿಭಾಗ, ಇಲ್ಲಿನ ಗ್ರಂಥಾಲಯಗಳೂ, ಗ್ರಂಥಾಲಯ ಉಪಸಮಿತಿಗೆ ಸಂಬಂಧಿಸಿದ ಸಿಬ್ಬಂದಿ ವರ್ಗ, ಸಭಾಪತಿಯವರ ಕಚೇರಿಯ ಅಧಿಕಾರಿ ವರ್ಗ ಹೀಗೆ ಅನೇಕ ಕಚೇರಿಯನ್ನು ಈ ಕಾರ್ಯಕ್ಕಾಗಿ ಬಳಸಿಕೊಂಡಿದ್ದೇನೆ. ಎಲ್ಲರಿಗೂ ನನ್ನ ಮನಃಪೂರ್ವಕ ಕೃತಜ್ಞತೆಗಳು. ಆತ್ಮೀಯರಾದ ಶ್ರೀ ಆರ್.ಟಿ. ವಿಠ್ಠಲಮೂರ್ತಿ, ಶ್ರೀಮತಿ ಲತಾಗುತ್ತಿ , ಕು. ಯು.ಬಿ. ರಾಜಲಕ್ಷ್ಮೀ, ಡಾ. ಮಂಜುಳಾ ಹುಲ್ಲಹಳ್ಳಿ, ಡಾ. ಟಿ.ಕೆ. ಕೆಂಪೇಗೌಡ. ಶ್ರೀ ಟಿ.ವಿ. ರಾಮಚಂದ್ರ ಇವರೆಲ್ಲರ ಒತ್ತಾಸೆಯೂ ನನಗಿದೆ. ಇವರಿಗೂ ನಾನು ಋಣಿ.

ಇಷ್ಟಾದರೆ ಒಂದು ಪುಸ್ತಕ ಆಗಿ ಬಿಡುವುದಿಲ್ಲ. ಮನೆಯೂ ನನ್ನ ಕೆಲಸಗಳಲ್ಲಿ ನನ್ನೊಂದಿಗಿರಬೇಕು. ಪತಿ ಡಾ. ಕೆ.ಎಸ್. ಪ್ರಸಾದ್ ಅವರು ನಮ್ಮ ಗೃಹ ಜೀವನದ ವೇಳೆಯಲ್ಲಿ ಸಿಂಹಪಾಲನ್ನು ಇದಕ್ಕಾಗಿ ವಿನಿಯೋಗಿಸಲು ಅನುವು ಮಾಡಿಕೊಟ್ಟಿದ್ದೇ ಅಲ್ಲದೆ ತಾವೂ ಸಹ ನನ್ನೊಂದಿಗೆ ಕುಳಿತು ಶಾಸಕಾಂಗದ ಭಾಷಣಗಳ ಕ್ಲಿಪ್ಪಿಂಗ್ಸ್ ತಯಾರಿಸಿ, ವಿಷಯವಾರು ಜೋಡಿಸಿ, ಮುಖ್ಯವಾದದನ್ನು ಹೈಲೈಟ್ ಮಾಡಿ ಇಟ್ಟುಕೊಳ್ಳುವಲ್ಲಿ ಸಹಭಾಗಿಯಾಗಿದ್ದಾರೆ. ಮಗ ಶಶಾಂಕ ಕೂಡ ತನಗಾಗುವ ನೆರವು ನೀಡಿದ್ದಾನೆ.

ಎಲ್ಲರಿಗೂ ನನ್ನ ಅನನ್ಯ ಕೃತಜ್ಞತೆಗಳು.

24.3.2005

**ಡಾ॥ ಟಿ.ಸಿ. ಪೂರ್ಣಿಮಾ**

# ಪರಿವಿಡಿ

## ಭಾಗ –1



## ಭಾಗ – 2

## ಹಿಂದುಳಿದವರ ಪರ



## ಮಸೂದಾ ವಿಚಾರಗಳು



## ಆ ಕಾಲದ ಬಜೆಟ್ ಭಾಷಣಗಳು



## ವೈವಿಧ್ಯಮಯ ನಿರ್ಣಯಗಳ ಮಂಡನೆ

### ಇತರೆ



## ಭಾಗ–3

### *ಗಣ್ಯರ ದೃಷ್ಟಿಯಲ್ಲಿ*

# ಎಸ್.ಸಿ. ಮಲ್ಲಯ್ಯ

ಕರ್ನಾಟಕ ರಾಜ್ಯದ ಸಂಸದೀಯ ಇತಿಹಾಸದ ಆರಂಭ ಸ್ವಾತಂತ್ರ್ಯ ಪೂರ್ವ ಕಾಲಕ್ಕೆ ಸೇರಿದ್ದು. ಬ್ರಿಟಿಷರ ಅಧಿಪತ್ಯದಡಿಯಲ್ಲಿ ಮೈಸೂರರಸರು ಆಡಳಿತ ನಡೆಸುತ್ತಿದ್ದ ಕಾಲ. 1881ರಲ್ಲಿ ಪ್ರಜಾಭಿಪ್ರಾಯವನ್ನಾಧರಿಸಿ ಆಡಳಿತ ನಡೆಸುವ ಹೊಸ ಚಿಂತನೆ ಮೂಡಿದ್ದು, ಮಹಾರಾಜ ಹತ್ತನೆ ಚಾಮರಾಜ ಒಡೆಯರ್ ಹಾಗೂ ದಿವಾನ್ ಎಂ. ರಂಗಾಚಾರ್ಲು ಅವರಿಗೆ. ಆಗ ಹುಟ್ಟಿ ಬಂದದ್ದೇ ಮೈಸೂರು ಪ್ರಜಾಪ್ರತಿನಿಧಿ ಸಭೆ. ಮೈಸೂರ ಸಂಸ್ಥಾನದ ಎಲ್ಲ ತಾಲ್ಲೂಕುಗಳ ರೈತರ ಮತ್ತು ವ್ಯಾಪಾರೀ ವರ್ಗದ ಪ್ರಮುಖರ ಸಭೆ ಕರೆದು ಪ್ರಜಾಪ್ರತಿನಿಧಿ ಸಭೆ ರಚಿಸಲಾಯಿತು. ಈ ಪೈಕಿ ನಾಗಮಂಗಲವನ್ನು ಪ್ರತಿನಿಧಿಸುತ್ತಿದ್ದ ಸೋಮನಹಳ್ಳಿ ಚಿಕ್ಕೇಗೌಡರು ಒಬ್ಬರು.

ಸೋಮನಹಳ್ಳಿ ಆಗಿನ ಅವಿಭಜಿತ ಮೈಸೂರು ಜಿಲ್ಲೆಗೆ ಸೇರಿದ್ದ ಗ್ರಾಮ. ಈಗಿನ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನಲ್ಲಿ ಈ ಗ್ರಾಮವಿದೆ. ಮೈಸೂರು ಬೆಂಗಳೂರು ಹೆದ್ದಾರಿಯಲ್ಲೇ ಇರುವ ಸೋಮನಹಳ್ಳಿ ಶಿಂಷಾ ನದಿಯ ದಂಡೆಯಲ್ಲೇ ಇದ್ದರೂ ಅದರ ಪ್ರಯೋಜನ ಪಡೆಯಲಾರದ ಮಳೆಯಾಶ್ರಿತ ಪ್ರದೇಶ. ಒಂದರ್ಥದಲ್ಲಿ ಆ ಕಾಲಕ್ಕೆ ಬೆಂಗಾಡೇ. ಚಿಕ್ಕೇಗೌಡರು ಇದೇ ಸೋಮನಹಳ್ಳಿಯ ಪಟೇಲ್ ಮನೆತನದವರು. ಸಮಾಜಮುಖಿಯಾಗಿದ್ದ ಅವರು ಮೂಲತಃ ಒಕ್ಕಲುತನವನ್ನೇ ಆಧರಿಸಿದ್ದರೂ ರಸ್ತೆ ಕಾಮಗಾರಿಗಳ ಕಾಂಟ್ರಾಕ್ಟು ಮಾಡಿಸುತ್ತಿದ್ದರು.

1881ರಲ್ಲಿ ಪ್ರಜಾಪ್ರತಿನಿಧಿ ಸಭೆ ಸ್ಥಾಪನೆಯಾದಾಗಿನಿಂದ ಒಟ್ಟು 3 ಬಾರಿ ಚಿಕ್ಕೇಗೌಡರು ಸಭೆಯ ಸದಸ್ಯರಾಗಿದ್ದರು. 1881ರಲ್ಲಿ, 1888–91ರಲ್ಲಿ ನಾಗಮಂಗಲದಿಂದ, 1909–11ರಲ್ಲಿ ಮಂಡ್ಯದಿಂದ ಸದಸ್ಯತ್ವ ಹೊಂದಿದ್ದರು. ಮೊದಲು ನಾಮ ನಿರ್ದೇಶಿತ ಸದಸ್ಯರಾಗಿದ್ದ ಚಿಕ್ಕೇಗೌಡರು ನಂತರ ಚುನಾವಣೆಗಳನ್ನು ಎದುರಿಸಿಯೂ ಸದಸ್ಯರಾಗಿ ಚುನಾಯಿತರಾದವರು. ಚಾಮರಾಜ ಒಡೆಯರ್ ಅವರ ನಂತರ ಪಟ್ಟ ವಹಿಸಿಕೊಂಡ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ನಾಡು ಅತೀವ ಪ್ರಗತಿ ಸಾಧಿಸುವಾಗ ಚಿಕ್ಕೇಗೌಡರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದು ತಮ್ಮ ಚಿಂತನೆಗಳನ್ನೂ ನೀಡಿದವರು. ಅವರ ಅವಧಿಯಲ್ಲೇ ನಾಡು ಪ್ರಗತಿಪಥದಲ್ಲಿ ಮುನ್ನಡೆದಿತ್ತು. ವಿವಿಧ ರಂಗಗಳಲ್ಲಿ ಅಭಿವೃದ್ಧಿ ಸಾಧಿಸುತ್ತಿದ್ದ ಮೈಸೂರು **ಮಾದರಿ ರಾಜ್ಯ** ಎಂಬ ಹೆಗ್ಗಳಿಕೆಗೂ ಪಾತ್ರವಾಗಿಬಿಟ್ಟಿತು.

ಇದೆಲ್ಲದರ ಜೊತೆಗೆ ಹಿಂದುಳಿದ ವರ್ಗದವರ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವ ಚಳವಳಿಯೊಂದು ಅದೇ ಕಾಲಕ್ಕೆ ಮೊಳಕೆಯೊಡೆಯಿತು. ಹಿಂದುಳಿದವರನ್ನು ಮುಂದೆ ತರುವ ನಿಟ್ಟಿನಲ್ಲಿ ಹೊಸ ಅಲೆ, ಹೊಸ ಚಿಂತನೆಯ ಕಾಲ ಉಗಮವಾಯಿತು. ಅದರ ಉದ್ದೇಶದಿಂದಲೇ

ಉದಯವಾದ ಪ್ರಜಾಮಿತ್ರ ಮಂಡಲಿ ಮೈಸೂರಿನ ಮೊಟ್ಟ ಮೊದಲ ರಾಜಕೀಯ ಪಕ್ಷ ಎನಿಸಿಕೊಂಡಿತು. ಈ ಪಕ್ಷದ ಜೊತೆಯೂ ಚಿಕ್ಕೇಗೌಡರು ಗುರುತಿಸಿಕೊಂಡರು.

ಸೋಮನಹಳ್ಳಿಯ ಚಿಕ್ಕೇಗೌಡ ಹಾಗೂ ಬಿದರಕೋಟ ಚೆನ್ನಮ್ಮ ದಂಪತಿಗಳ ಮಗನೇ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾದ, ಹಿಂದುಳಿದವರ, ದಲಿತರ, ಬಡವರ ಏಳಿಗೆಗಾಗಿ ಶ್ರಮಿಸಿದ ಎಸ್.ಸಿ. ಮಲ್ಲಯ್ಯನವರು. ಕರ್ನಾಟಕ ಸಂಸದೀಯ ಚರಿತ್ರೆಯಲ್ಲಿ ಮಲ್ಲಯ್ಯನವರದು ಅಚ್ಚಳಿಯದ ಹೆಸರು. ಕನ್ನಡತಿಯ ಈ ಸುಪುತ್ರ ದೂರದೃಷ್ಟಿಯ ಮುತ್ಸದ್ದಿ, ಶ್ರೇಷ್ಠ ರಾಜಕಾರಣಿ, ದಕ್ಷ ಸಂಸದೀಯ ಪಟು, ಸಮಾಜಪರ ಚಿಂತಕ ಎನಿಸಿಕೊಂಡವರು. ಅತ್ಯಂತ ಸಾತ್ವಿಕ, ಸಜ್ಜನ, ಮೃದುಭಾಷಿ ಎನಿಸಿಕೊಂಡಿದ್ದ ಮಲ್ಲಯ್ಯನವರು ಅಷ್ಟೇ ದಿಟ್ಟ ನಡೆಯ, ದಿಟ ನುಡಿಯ ಸ್ವಾಮಿನಿಷ್ಠ ವ್ಯಕ್ತಿಯೂ ಆಗಿದ್ದರು. ಅವರ ಪ್ರಾಮಾಣಿಕತೆ, ನಿಷ್ಠಾವಂತಿಕೆ ಅವರನ್ನೊಬ್ಬ ಮಹಾನ್ ನಾಯಕರನ್ನಾಗಿ ರೂಪಿಸಿದ್ದವು. ಜನಾನುರಾಗಿಯಾಗಿ, ಜನೋಪಯೋಗಿ ಚಿಂತನೆ ಹಾಗೂ ಕಾರ್ಯಪರತೆಯಿಂದ ಅತ್ಯಂತ ಜನಪ್ರಿಯರೂ ಆಗಿದ್ದರು. ಅತ್ಯಂತ ವರ್ಚಸ್ವೀ ನಾಯಕರೆನಿಸಿದ್ದರು.

**ಕೌಟುಂಬಿಕ ಬದುಕು:**

ಚಿಕ್ಕೇಗೌಡ ದಂಪತಿಗಳ ಎರಡನೇ ಗಂಡು ಮಗುವಾಗಿ 1896ರಲ್ಲಿ ಮಲ್ಲಯ್ಯನವರು ಜನಿಸಿದರು. 7 ಜನ ಅಕ್ಕ ತಂಗಿಯರು ಹಾಗೂ ಇಬ್ಬರು ಅಣ್ಣ ತಮ್ಮಂದಿರ ಮಧ್ಯೆ ಬೆಳೆದ ಬಾಲಕ ಮಲ್ಲಯ್ಯ ಸೋಮನಹಳ್ಳಿ ಸಮೀಪದ ನಿಡಘಟ್ಟದಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು. ಮದ್ದೂರಿನಲ್ಲಿ ಮಾಧ್ಯಮಿಕ ಶಾಲೆ ಹಾಗೂ ಚನ್ನಪಟ್ಟಣದಲ್ಲಿ ಪ್ರೌಢಶಾಲಾ ವ್ಯಾಸಂಗ ಮಾಡಿ ಔಪಚಾರಿಕ ವಿದ್ಯಾಭ್ಯಾಸವನ್ನು ಅಲ್ಲಿಗೇ ನಿಲ್ಲಿಸಿದರು. ತಂದೆ ಅನುಸರಿಸಿದ ಸಾರ್ವಜನಿಕ ಜೀವನ ಮಲ್ಲಯ್ಯನವರನ್ನೂ ಕೈಬೀಸಿ ಕರೆಯಿತು. ಜನಸೇವೆಗೆ ಮುಂದಾದರು. ಈ ಮಧ್ಯೆ ವೈಯಕ್ತಿಕ ಆಸಕ್ತಿಯಿಂದ ಇಂಗ್ಲಿಷ್ ಭಾಷೆಯನ್ನು ಮಲ್ಲಯ್ಯನವರು ಅಭ್ಯಾಸ ಮಾಡಿಕೊಂಡರು.

1921ರಲ್ಲಿ ತಂದೆ ಚಿಕ್ಕೇಗೌಡರು ನಿಧನ ಹೊಂದಿದ ನಂತರ ಅದೇ ವರ್ಷ ಮಲ್ಲಯ್ಯನವರ ಹೆಸರು ಮತದಾರರ ಯಾದಿಯಲ್ಲಿ ಸೇರ್ಪಡೆಯಾಯಿತು. 1922ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಅವರು ಚುನಾವಣೆ ಮೂಲಕ ಆಯ್ಕೆಯೂ ಆದರು. ಅಲ್ಲಿಂದಾಚೆಗೆ ನಿರಂತರ 26 ವರ್ಷಗಳ ಕಾಲ ಮಲ್ಲಯ್ಯನವರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. 1947ರಲ್ಲಿ ಸ್ವಾತಂತ್ರ್ಯ ಬಂದ ಮೇಲೂ ಒಂದು ವರ್ಷ ಅವರು ಶಾಸನ ಸಭೆಯ ಸದಸ್ಯರಾಗಿ ಮುಂದುವರೆದರು. ಸ್ವಾತಂತ್ರ್ಯ ಪೂರ್ವದಲ್ಲಿ ನ್ಯಾಯ ವಿಧಾಯಕ ಸಭೆ (ವಿಧಾನ ಪರಿಷತ್ತು)ಗೆ, ಪ್ರಜಾ ಪ್ರತಿನಿಧಿ ಸಭೆಯಿಂದಲೇ ಇಬ್ಬರು ಸದಸ್ಯರನ್ನು ನೇಮಿಸುವ ಹಕ್ಕೂ ಸರ್ಕಾರಕ್ಕಿತ್ತು. ಇಂಥ ನೇಮಕಾತಿಯನ್ನು ಮಲ್ಲಯ್ಯನವರು 1928 ರಿಂದ 30 ಹಾಗೂ 1934 ರಿಂದ 36ರ ಎರಡು ಅವಧಿಗೆ ಪಡೆದಿದ್ದರು.

ಎಸ್.ಸಿ. ಮಲ್ಲಯ್ಯ ಹಾಗೂ ಮದ್ದೂರಿನ ತಾಯಮ್ಮ ದಂಪತಿಗಳಿಗೆ 8 ಹೆಣ್ಣು ಮತ್ತು ಇಬ್ಬರು ಗಂಡು ಮಕ್ಕಳು. ಮುಂದೆ ಈ ಇಬ್ಬರೂ ಗಂಡು ಮಕ್ಕಳು ರಾಜಕೀಯ ಪ್ರವೇಶ ಮಾಡಿ ಸಾರ್ವಜನಿಕ ಸೇವೆಯನ್ನೇ ಆಯ್ಕೆ ಮಾಡಿಕೊಂಡರು. ಮಲ್ಲಯ್ಯನವರ ಹಿರಿಯ ಮಗ ವಿದೇಶದಲ್ಲಿ ವ್ಯಾಸಂಗ ಮಾಡಿದ ಕಾನೂನು ತಜ್ಞ ಶ್ರೀ ಎಸ್.ಎಂ. ಕೃಷ್ಣ 4 ದಶಕಗಳಿಗೂ ಮೀರಿದ ರಾಜಕೀಯ ಅನುಭವ ಪಡೆದವರು. 1962ರಲ್ಲಿ ವಿಧಾನಸಭೆ ಪ್ರವೇಶಿಸಿ 67ರವರೆಗೆ, 1989–94ರವರೆಗೆ ಹಾಗೂ 1999 ರಿಂದ 2004ರವರೆಗೆ ವಿಧಾನ ಸಭಾ ಸದಸ್ಯರಾಗಿ, ಸ್ಪೀಕರ್ ಆಗಿ, ಉಪ ಮುಖ್ಯಮಂತ್ರಿಯಾಗಿ, ಮುಖ್ಯಮಂತ್ರಿಯಾಗಿ ಕರ್ತವ್ಯ ನಿರ್ವಹಿಸಿದವರು. 1972–77 ರವರೆಗೆ ವಿಧಾನ ಪರಿಷತ್ತಿನ ಸದಸ್ಯರೂ ಆಗಿದ್ದರು. ಲೋಕಸಭೆಯಲ್ಲಿ 1968–70, 1971–72 ಮತ್ತು 1980–85ರ ಅವಧಿಯಲ್ಲಿ ಸದಸ್ಯರಾಗಿದ್ದು ಕೈಗಾರಿಕಾ ಖಾತೆ ರಾಜ್ಯ ಸಚಿವರಾಗಿ (1982–84), ಹಣಕಾಸು ಖಾತೆ ರಾಜ್ಯ ಸಚಿವರಾಗಿ (1984–85) ರಾಜಕೀಯದ ಏರೆತ್ತರವನ್ನು ಕಂಡಿದ್ದಾರೆ. 1999ರಲ್ಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿಯೂ ಕನ್ನಡ ನೆಲದ ಜನಮಾನಸದಲ್ಲಿ ತಮ್ಮ ಮುದ್ರೆ ಒತ್ತಿದರು. ರಾಜ್ಯ ವಿಧಾನ ಮಂಡಲದ ಉಭಯ ಸದನಗಳಲ್ಲಿ ಹಾಗೂ ಕೇಂದ್ರ ಸಂಸತ್ತಿನ ಉಭಯ ಸದನಗಳಲ್ಲಿ ಸದಸ್ಯತ್ವ ಪಡೆದ ಕೆಲವೇ ನಾಯಕರ ಪೈಕಿ ಶ್ರೀ ಕೃಷ್ಣ ಅವರು ಒಬ್ಬರು. 2004ರಲ್ಲಿ ಅವರು ಮಹಾರಾಷ್ಟ್ರದ ರಾಜ್ಯಪಾಲರಾಗಿ ಗೌರವಾನ್ವಿತ ಸ್ಥಾನವನ್ನು ಅಲಂಕರಿಸಿದ ಸತ್ಕೀರ್ತಿಗೆ ಪಾತ್ರರಾಗಿದ್ದಾರೆ.

ಮಲ್ಲಯ್ಯನವರ ಕಿರಿಯ ಮಗ ಶ್ರೀ ಎಸ್.ಎಂ. ಶಂಕರ್ ಅವರೂ ಸಮಾಜ ಸೇವೆ ಮೂಲಕವೇ ಖ್ಯಾತಿ ಪಡೆದವರು. ತಂದೆ ತಳಪಾಯ ಹಾಕಿದ ಶಿಕ್ಷಣ ಸಂಸ್ಥೆಗಳನ್ನು ಅಭಿವೃದ್ಧಿಗೊಳಿಸಿಕೊಂಡು, ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುತ್ತಾ, ಕಾಂಗ್ರೆಸ್ ಕಾರ್ಯಕರ್ತರಾಗಿ ಮಂಡ್ಯ ಜಿಲ್ಲಾ ರಾಜಕೀಯದಲ್ಲಿ ಪ್ರಮುಖ ಸ್ಥಾನ ನೆಲೆಗೊಳಿಸಿಕೊಂಡವರು. 2004ರಲ್ಲಿ ರಾಜ್ಯದ ಸ್ಥಳೀಯ ಸಂಸ್ಥೆಗಳಿಂದ ಮೇಲ್ಮನೆಗೆ ನಡೆದ ಚುನಾವಣೆಗಳಲ್ಲಿ ಮಂಡ್ಯ ಕ್ಷೇತ್ರದಿಂದ ಆರಿಸಿ ಬರುವ ಮೂಲಕ ಶಾಸನ ಸಭೆಯನ್ನು ಮೊದಲ ಬಾರಿಗೆ ಪ್ರವೇಶಿಸಿದರು. ಈ ಕೃತಿ ರಚನೆಯ ವೇಳೆಗೆ ಮಲ್ಲಯ್ಯನವರ ಇಬ್ಬರು ಮಕ್ಕಳೂ, ಸಕ್ರಿಯ ರಾಜಕಾರಣದಲ್ಲಿದ್ದರೆನ್ನುವುದು ವಿಶೇಷ.

## ಸಾಮಾಜಿಕ ಬದುಕು

ಸಾರ್ವಜನಿಕ ಸೇವೆಗೇ ಜೀವನವನ್ನು ಮುಡುಪಾಗಿಸಿಕೊಂಡ ಮಲ್ಲಯ್ಯನವರು 1922ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಸೇರ್ಪಡೆಯಾದಾಗ ಅವರಿಗೆ ಕೇವಲ 26 ವರ್ಷ ವಯಸ್ಸು. ಮದ್ರಾಸಿನ ಜಸ್ಟಿಸ್ ಪಕ್ಷದ ನೆರಳಿನಲ್ಲಿ ಮೈಸೂರು ಸಂಸ್ಥಾನದಲ್ಲೂ ಆರಂಭವಾದ ಹಿಂದುಳಿದ ವರ್ಗದವರ ಹೋರಾಟ ಪ್ರಜಾಮಿತ್ರ ಪಕ್ಷ ಎಂಬ ರಾಜಕೀಯ ಪಕ್ಷದ ಸ್ವರೂಪ ಪಡೆದು ದೊಡ್ಡ ಆಂದೋಲನ ಮೈದಳೆಯಿತು. 1918ರಲ್ಲಿ ಲೆಸ್ಲಿ ಮಿಲ್ಲರ್ ಅಧ್ಯಕ್ಷತೆಯ ಸಮಿತಿ ಹಿಂದುಳಿದ ವರ್ಗದವರ ಪ್ರಾತಿನಿಧ್ಯದ ವಸ್ತುಸ್ಥಿತಿ ಪರಾಮರ್ಶಿಸಿ ಸಲ್ಲಿಸಿದ ವರದಿ ಅನೇಕ ಏರುಪೇರುಗಳ ನಡುವೆ 1921ರಲ್ಲಿ ಜಾರಿಗೆ

ಬಂದರೂ, ಅದು ಹೊಂದಿದ್ದ ಮಾರ್ಪಾಡುಗಳು ಪ್ರಜೆಗಳಲ್ಲೂ, ಪ್ರಜಾಪ್ರತಿನಿಧಿಗಳಲ್ಲೂ ಅಸಮಾಧಾನವನ್ನು ಉಳಿಸೇ ಇತ್ತು.

ಸರಿ ಸುಮಾರು ಅದೇ ಕಾಲಮಾನದಲ್ಲಿ ಪ್ರಜಾಪ್ರತಿನಿಧಿ ಸಭೆ ಪ್ರವೇಶಿಸಿದ ಮಲ್ಲಯ್ಯನವರೂ ಹಿಂದುಳಿದ ವರ್ಗದವರ ಪ್ರಗತಿಯ ವಿಚಾರವನ್ನೇ ತಮ್ಮ ಮುಖ್ಯ ಚರ್ಚಾ ವಿಷಯವಾಗಿ ಇರಿಸಿಕೊಂಡರು. ಈ ವಿಚಾರವಾಗಿ ಅವರು ಅಸೆಂಬ್ಲಿಯ ಕಲಾಪಗಳಲ್ಲಿ ಚರ್ಚಿಸಿರುವುದನ್ನು ವಿವಿಧ ರೂಪದ ಪ್ರಸ್ತಾಪಗಳಲ್ಲಿ ಅವರು ಸಭಾ ಸದಸ್ಯತ್ವದ ಆರಂಭದಿಂದ ಕೊನೆಯವರೆಗೂ ಕಾಣಬಹುದು. ಅದರಲ್ಲೂ ಸರ್ಕಾರಿ ಹುದ್ದೆಗಳಲ್ಲಿ ಹಿಂದುಳಿದವರಿಗೆ, ದಲಿತರಿಗೆ ಮೀಸಲಾತಿ ಸೌಲಭ್ಯಗಳನ್ನು ಹೆಚ್ಚಿಸುವಂತೆ, ಅವರ ಸರ್ಕಾರಿ ನೌಕರಿಗಳನ್ನು ಖಾಯಂಗೊಳಿಸುವಂತೆ ಸರ್ಕಾರದ ಮನವೊಲಿಸಿದ್ದಾರೆ. ಹಿಂದುಳಿದ ವರ್ಗದವರೂ ಸಂಸ್ಕೃತಾಭ್ಯಾಸ ಮಾಡಲು ಅವಕಾಶ ಕಲ್ಪಿಸಬೇಕೆಂದು ನಿರ್ಣಯಗಳ ಮೂಲಕ ಒತ್ತಾಯಿಸುವ ಮಲ್ಲಯ್ಯನವರು ಪುರೋಹಿತಶಾಹಿಗೆ ನೀಡುವ ಅಪರಿಮಿತ ಗಣ್ಯತೆಯನ್ನು ಕಡಿತಗೊಳಿಸಬೇಕೆಂದೂ ಆಗ್ರಹಿಸಿದ್ದಾರೆ. ಈ ಮೂಲಕ ಸಾಮಾಜಿಕ ಸಮಾನತೆಯನ್ನು ರೂಪಿಸಲು ಮಲ್ಲಯ್ಯನವರು ಶ್ರಮಿಸಿರುವುದು ಗಮನಾರ್ಹವಾಗಿದೆ.

ಇನ್ನು ಶಿಕ್ಷಣ. ಶಿಕ್ಷಣ ಕ್ಷೇತ್ರ ಕೂಡ ಮಲ್ಲಯ್ಯನವರ ಆಸಕ್ತಿಯ ವಿಷಯವೇ. ಅದರಲ್ಲೂ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಬೇಕೆನ್ನುವುದು ಅವರ ಮೂಲಚಿಂತನೆಯಾಗಿತ್ತು. ಆ ಕಾಲದಲ್ಲಿ ಅತ್ಯಂತ ಕನಿಷ್ಠ ಸಂಖ್ಯೆಯಲ್ಲಿದ್ದ ಪ್ರಾಥಮಿಕ ಶಾಲೆಗಳಿಗೆ ವಿದ್ಯಾರ್ಥಿಗಳು ಹಳ್ಳಿಹಳ್ಳಿಗಳಿಂದ ನಡೆದು ಬರಬೇಕಾದ ಪ್ರಸಂಗವಿದ್ದುದನ್ನು ಮನಗಂಡ ಮಲ್ಲಯ್ಯನವರು ತಮ್ಮ ಸೋಮನಹಳ್ಳಿಯಲ್ಲಿ ವಿದ್ಯಾರ್ಥಿ ನಿಲಯವೊಂದನ್ನು ಆರಂಭಿಸಿದರು. ವಿದ್ಯಾರ್ಥಿಗಳು ಅಲ್ಲಿ ಉಳಿದುಕೊಂಡು ಮದ್ದೂರಿನ ಶಾಲೆಗೆ ಹೋಗಿ ವಿದ್ಯಾಭ್ಯಾಸ ಮಾಡಿಕೊಳ್ಳಬಹುದಿತ್ತು. ವಿದ್ಯಾರ್ಥಿಗಳಿಂದ ಒಂದಿಷ್ಟು ದವಸ ಧಾನ್ಯಗಳನ್ನು ಮಾತ್ರ ಪಡೆಯುತ್ತಿದ್ದ ವಿದ್ಯಾರ್ಥಿ ನಿಲಯದಲ್ಲಿ ಬಡವರಿಂದ ಏನನ್ನೂ ಅಪೇಕ್ಷಿಸುತ್ತಿರಲಿಲ್ಲ ಎನ್ನುವುದು ಮಹತ್ವದ ವಿಷಯ. ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಸ್ಕಾಲರ್ ಷಿಪ್ ಕೊಡಿಸುವ ಬಗ್ಗೆ, ಹಿಂದುಳಿದ ವರ್ಗದ ಶಿಕ್ಷಕರನ್ನು ನೇಮಕ ಮಾಡುವ ಬಗ್ಗೆ, ಹೆಚ್ಚಿನ ಸಂಖ್ಯೆಯಲ್ಲಿ ಶಾಲೆಗಳನ್ನು ಆರಂಭಿಸುವ ಬಗ್ಗೆ ಅವರು ಸದನದಲ್ಲಿ ಪ್ರಸ್ತಾಪಿಸಿದ್ದಾರೆ. ಉನ್ನತ ಶಿಕ್ಷಣಕ್ಕೂ ಮಾನ್ಯತೆ ನೀಡಬೇಕೆನ್ನುವುದನ್ನು ಸದನದ ಕಲಾಪಗಳ ಸಂದರ್ಭದಲ್ಲಿ ಒತ್ತಾಯಿಸಿರುವ ಮಲ್ಲಯ್ಯನವರು ಸ್ವತಃ ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿ ಮೌಲಿಕ ಚಿಂತನೆಗಳನ್ನು ವಿನಿಮಯ ಮಾಡಿದ್ದಾರೆ.

ಮಲ್ಲಯ್ಯನವರು ಸ್ಥಾಪಿಸಿದ ವಿದ್ಯಾರ್ಥಿ ನಿಲಯದಲ್ಲಿ ಹರಿಜನ ವಿದ್ಯಾರ್ಥಿಗಳಿಗೂ ವಾಸ್ತವ್ಯಕ್ಕೆ ಅವಕಾಶ ಮಾಡಿಕೊಟ್ಟಿದ್ದು ವಿದ್ಯಾರ್ಥಿ ನಿಲಯದ ಹಿರಿಮೆಯನ್ನು ಹೆಚ್ಚಿಸಿತು. ಆದರೆ ಮಲ್ಲಯ್ಯನವರು

ಅಂತಹ ಹಿರಿಮೆಗಳಿಸಬೇಕೆಂಬ ಕಾರಣಕ್ಕೆ ಹರಿಜನ ವಿದ್ಯಾರ್ಥಿಗಳನ್ನು ವಿದ್ಯಾರ್ಥಿ ನಿಲಯಕ್ಕೆ ಸೇರಿಸಿಕೊಂಡವರೇನಲ್ಲ. ಹರಿಜನೋದ್ಧಾರಕ್ಕಾಗಿ ಅವರು ಅಸೆಂಬ್ಲಿಯಲ್ಲಿ ಮಾಡಿರುವ ಭಾಷಣಗಳನ್ನು ನೋಡಿದಾಗ ಅವರ ದಲಿತಪರ ಕಾಳಜಿ ಹೇಗಿತ್ತೆಂಬುದನ್ನು ಮನಗಾಣಬಹುದು. ವಿದ್ಯಾರ್ಥಿ ನಿಲಯದಲ್ಲಿ ಹರಿಜನ ವಿದ್ಯಾರ್ಥಿಗಳಲ್ಲಿ ವಾಸ್ತವ್ಯವನ್ನು ಒದಗಿಸಿರುವುದೂ, ಇತರ ಬಾಲಕರೊಂದಿಗೆ ಅವರನ್ನೂ ಸಹಪಂಕ್ತಿ ಭೋಜನದಲ್ಲಿ ಕೂರಿಸುವುದರ ಬಗ್ಗೆ ಎಲ್ಲೆಡೆ ಸಾಕಷ್ಟು ಚರ್ಚೆಯಾಗುತ್ತಿದ್ದದ್ದು 1934ರಲ್ಲಿ ಮಹಾತ್ಮಾ ಗಾಂಧೀಜಿಯವರ ಗಮನಕ್ಕೂ ಬಂತು. ನಾಲ್ವಡಿ ಕೃಷ್ಣರಾಜ ಒಡೆಯರ್ ಮಾದರಿ ಮೈಸೂರನ್ನು ನೋಡಿ, ಈ ಭಾಗದಲ್ಲಿ ಹರಿಜನ ಕಲ್ಯಾಣಕ್ಕಾಗಿ ನಿಧಿ ಸಂಗ್ರಹಿಸಲು ಬಂದಿದ್ದ ಗಾಂಧೀಜಿಯವರು ಬೆಂಗಳೂರಿಗೆ ವಾಪಸಾಗುವಾಗ ಮಾರ್ಗ ಮಧ್ಯದಲ್ಲಿ ಸೋಮನಹಳ್ಳಿ ಮಲ್ಲಯ್ಯನವರ ವಿದ್ಯಾರ್ಥಿನಿಲಯಕ್ಕೂ ಭೇಟಿ ನೀಡಿದ್ದು ವಿಶೇಷ. ಹರಿಜನೋದ್ಧಾರಕ್ಕಾಗಿ ಮಲ್ಲಯ್ಯನವರು ಮಾಡುತ್ತಿದ್ದ ಮಹತ್ಕಾರ್ಯವನ್ನು ಗಾಂಧೀಜಿಯವರು ಈ ಸಂದರ್ಭದಲ್ಲಿ ಕೊಂಡಾಡಿದರು. ಹರಿಜನರ ನಿಧಿಗಾಗಿ ಹಾಕಲು ಏನೂ ಇಲ್ಲದೆ ನಿಂತಿದ್ದ ಮಲ್ಲಯ್ಯನವರ ಅಳಿಯ ವಿ.ಬಿ. ತಮ್ಮಯ್ಯ ಭಾವಾವೇಶಗೊಂಡು ತಮ್ಮ ಕಿವಿಯ ಹತ್ತಕಡಕುಗಳನ್ನೇ ಬಿಚ್ಚಿ ನಿಧಿಗೆ ಅರ್ಪಿಸಿದರು. ಎರಡು ವರ್ಷದ ಮಗು ಎಸ್.ಎಂ. ಕೃಷ್ಣರ ಕೈಲಿ ನಿಧಿಗೆ ಚಿಲ್ಲರೆ ಕಾಸು ಹಾಕಿಸಿದ್ದೂ ಇದೆ. ಈ ಸಂದರ್ಭದಲ್ಲಿ ಸೋಮನಹಳ್ಳಿಯ ಹರಿಜನ ಕೇರಿಯಲ್ಲಿ ಹಬ್ಬದ ಸಂಭ್ರಮ ಉಂಟಾಗಿತ್ತು.

ಮಲ್ಲಯ್ಯನವರು ಹೊಂದಿದ್ದ ದಲಿತರ, ಶೋಷಿತರ ಪರ ಕಾಳಜಿಯನ್ನು ನಾವು ಮತ್ತೊಂದು ನಿಟ್ಟಿನಿಂದಲೂ ಕಾಣಬಹುದು. ಸಮಾನತೆಯ ಪ್ರತಿಷ್ಠಾಪನೆಗೆ ಹಗಲಿರುಳು ಯತ್ನಿಸುತ್ತಿದ್ದ ಮಲ್ಲಯ್ಯನವರು ಮೊದಲು ದೀನ ದಲಿತರ ಹೆಸರನ್ನು ಎತ್ತಿ ಹಿಡಿಯುವ ಕೆಲಸಕ್ಕೆ ಕೈ ಹಾಕಿದರು. ಅವರ ದೃಷ್ಟಿಯಲ್ಲಿ ಕಾಳ, ಬೋರ, ಸಿದ್ಧ ಎಂದು ಏಕವಚನದಂತೆ ಸಂಬೋಧಿಸುವುದು ವ್ಯಕ್ತಿಯನ್ನು ಉದ್ದೇಶಪೂರ್ವಕವಾಗಿ ಕೀಳಾಗಿ ಕಾಣುವಂಥದ್ದು ಎನಿಸುತ್ತಿತ್ತು. ಆ ಹೆಸರುಗಳಿಗೆ ಅಪ್ಪ, ಅಣ್ಣ, ಅಯ್ಯ ಎನ್ನುವ ಗೌರವ ಸೂಚಕ ಪದಗಳನ್ನು ಸೇರಿಸುವಂತೆ ಸದನದಲ್ಲಿ ವಾದಿಸಿ ಸರ್ಕಾರಕ್ಕೆ ತಾಕೀತು ಮಾಡಿದ್ದೇ ಅಲ್ಲದೆ, ಸಾರ್ವಜನಿಕರಲ್ಲಿ ಅದನ್ನು ಪರಿಪಾಲಿಸುವಂತೆ ಮನವರಿಕೆ ಮಾಡಿಕೊಡುತ್ತಿದ್ದರು.

ಅವಿಭಜಿತ ಮೈಸೂರು ಸಂಸ್ಥಾನದಿಂದ ಮಂಡ್ಯವನ್ನು ಒಂದು ಸ್ವತಂತ್ರ ಜಿಲ್ಲೆಯಾಗಿ ಬೇರ್ಪಡಿಸಿ ಅದಕ್ಕೊಂದು ಮುಕ್ತ ಅಸ್ತಿತ್ವ ರೂಪಿಸಿದ ರೂವಾರಿ ಮಲ್ಲಯ್ಯನವರೆಂದು ಗುರುತಿಸಲಾಗಿದೆ. 30ರ ದಶಕದ ಮಧ್ಯ ಭಾಗದಲ್ಲಿ ಮಲ್ಲಯ್ಯನವರು ಪ್ರಜಾಪ್ರತಿನಿಧಿ ಸಭೆಯ ಒಳಗೂ ಹೊರಗೂ ಕೈಗೊಂಡ ನಿರಂತರ ಪ್ರಯತ್ನ ಹಾಗೂ ಬೆಂಬಿಡದ ಛಲದ ಪರಿಣಾಮವಾಗಿ ಮಂಡ್ಯ ಒಂದು ಜಿಲ್ಲೆಯ ಸ್ಥಾನಮಾನಗಳಿಸಿಕೊಂಡಿತು. ಸಭೆಯಲ್ಲಿ ಮಂಡ್ಯವನ್ನು ಒಂದು ಜಿಲ್ಲೆಯಾಗಿ ಯಾವ

ಯಾವ ಕಾರಣಕ್ಕಾಗಿ ರೂಪುಗೊಳಿಸಬೇಕು ಎಂದು ವಾದಿಸಿದ ಮಲ್ಲಯ್ಯನವರು ಸದನದ ಹೊರಗೆ ಮಹಾರಾಜರ ಮನವೊಲಿಸಿ ಮಂಡ್ಯಕ್ಕೆ ಜಿಲ್ಲೆಯ ಸ್ಥಾನಮಾನ ದೊರಕುವಂತೆ ನೋಡಿಕೊಂಡರು. ಇದಕ್ಕೆ ಅವರು ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರ ಜೊತೆಗಿನ ತಮ್ಮ ಸ್ನೇಹವನ್ನೂ ಬಳಸಿಕೊಂಡರು.

ಸ್ವತಃ ಕೃಷಿಕರಾಗಿ ರೈತನ ಸಮಸ್ಯೆಗಳೇನೆಂದು ಅರಿತಿದ್ದ ಮಲ್ಲಯ್ಯನವರು ಸದಾ ಸರ್ವದಾ ರೈತಪರ ನಿಲುವನ್ನು ಹೊಂದಿದ್ದವರು. ರೈತರ ದುಡಿಮೆಗಿಂತಲೂ ಅದರ ಮೇಲೆ ಹಾಕುತ್ತಿದ್ದ ತೆರಿಗೆ ಜಾಸ್ತಿಯಾಯಿತೆಂದು ಪ್ರತಿಭಟಿಸುತ್ತಿದ್ದ ಮಲ್ಲಯ್ಯನವರು ಲಾಭದಾಯಕ ಕೃಷಿ ಪದ್ಧತಿಯತ್ತ ಗಮನ ಹರಿಸಲು ರೈತರಿಗೂ ತಿಳಿವಳಿಕೆ ನೀಡುತ್ತಿದ್ದರು. ಹವಾಮಾನಕ್ಕೆ ತಕ್ಕಂಥ ಬೆಳೆ ಬೆಳೆಯಬೇಕೆಂದು ಹೇಳುತ್ತಿದ್ದ ಮಲ್ಲಯ್ಯನವರು ರೈತರ ಒಳಿತಿಗಾಗಿ ಕೈಗೊಂಡ ಮತ್ತೊಂದು ಕೆಲಸ ನೀರಾವರಿ. ಕೆರೆಕಟ್ಟೆಗಳಲ್ಲಿ ಹೂಳೆತ್ತಿಸುವುದರಿಂದ ಹಿಡಿದು ನಾಲೆಯನ್ನು ರೂಪಿಸಿ ನೀರು ಹರಿಸುವವರೆಗೂ ಮಲ್ಲಯ್ಯನವರು ಅವಿರತ ಹೋರಾಟ ನಡೆಸಿರುವ ದಾಖಲೆಗಳಿವೆ. ಶಿಂಷಾ ನದಿಯ ದಡದಲ್ಲೇ ಇದ್ದರೂ ಅದರ ನೀರಿನ ಪ್ರಯೋಜನ ಪಡೆಯಲಾರದ ಹಳ್ಳಿಗಳವರೆಗೂ ನೀರೆಳೆದು ತಂದರು. ಶಿಂಷಾ ನದಿಯಿಂದ ಎಡ, ಬಲದಂಡೆಗಳಲ್ಲಿ ನಾಲೆಗಳನ್ನು ನಿರ್ಮಿಸಲು ತಮ್ಮ ದುಡಿಮೆಯ ಹಣವನ್ನು ಅವರು ವ್ಯಯ ಮಾಡಿದ್ದೂ ಇದೆ. ಅವರ ಅವಿರತ ಶ್ರಮವನ್ನು ಮನಗಂಡೇ ಶಿಂಷಾ ನಾಲೆಗೆ **ಮಲ್ಲಯ್ಯ ನಾಲೆ** ಎಂಬ ಜನಘೋಷಣೆಯಿದೆ.

ಮಲ್ಲಯ್ಯನವರು ಒಂದೆಡೆ ಮಹಾತ್ಮಾಗಾಂಧಿಯವರಂತೆ ವಿಚಾರ ಕ್ರಾಂತಿಯನ್ನು ಒಪ್ಪಿಕೊಂಡವರು. ಇನ್ನೊಂದೆಡೆ ಸರ್ ಎಂ.ವಿ. ಯವರಂತೆ ಪ್ರಗತಿ ಕ್ರಾಂತಿಗೆ ಒಗ್ಗಿಕೊಂಡವರು. ಹಾಗಾಗಿ ಅತ್ತ ಹಿಂದುಳಿದ ವರ್ಗದವರ ಏಳ್ಗೆ, ದಲಿತೋದ್ಧಾರ, ರೈತ ಪ್ರಗತಿ, ಮದ್ಯಪಾನ ನಿಷೇಧ, ವಯಸ್ಕರ ಶಿಕ್ಷಣದ ಮೂಲಕ ನಾಡಿನ ಪ್ರಗತಿಯ ಚಿಂತನೆ ಮಾಡಿದರೆ, ಇತ್ತ ಕೈಗಾರಿಕೀಕರಣ, ಕೃಷಿ ಕ್ಷೇತ್ರದಲ್ಲಿ ಆಧುನಿಕ ಪದ್ಧತಿ, ಆರೋಗ್ಯ-ನಿರ್ಮಲೀಕರಣದ ಹೊಸ ಆಲೋಚನೆಗಳಿಗೂ ಬೆಲೆ ಕೊಟ್ಟರು.

ತಾವಾಯಿತು ತಮ್ಮ ಕೆಲಸವಾಯಿತು ಎನ್ನುವ ಸ್ವಭಾವದ ಮಲ್ಲಯ್ಯನವರು ಜೀವನದುದ್ದಕ್ಕೂ ಮಾಡಿದ್ದೆಲ್ಲ ಇತರರ ಕೆಲಸವೇ. ಯಾರೇ ಕಷ್ಟವೆಂದು ಬಂದರೂ ಅವರ ನೆರವಿಗೆ ಇವರು ಮುಂದಾಗುತ್ತಿದ್ದರು. ತಮ್ಮ ಆಪ್ತ ಸ್ನೇಹಿತ ಎಂ.ಸಿ. ಲಿಂಗೇಗೌಡರ ಜೊತೆಗೂಡಿ ಚುನಾವಣೆಗಳನ್ನು ಸೆಣೆಸಿದ್ದರು, ಜನಪರ ಸೇವೆಗೆ ತೊಡಗಿದ್ದರು.

ತಮ್ಮ ಸಜ್ಜನಿಕೆಗೆ, ಮೃದುತನಕ್ಕೆ ಹೆಸರಾಗಿದ್ದ ಮಲ್ಲಯ್ಯನವರು ಆ ಕಾಲದ ಅತ್ಯಂತ ವರ್ಚಸ್ವೀ ನಾಯಕರೆನಿಸಿಕೊಂಡಿದ್ದರು. ಸ್ವಾತಂತ್ರ್ಯಾನಂತರ ಸರ್ಕಾರದ ಪುನರ್ರಚನೆಯ ಸಂದರ್ಭದಲ್ಲಿ ಶಾಸನ ಸಭೆಯ ಸದಸ್ಯತ್ವ ಹೊಂದಿದ್ದ ಎಸ್.ಸಿ. ಮಲ್ಲಯ್ಯನವರು 1948ರಲ್ಲಿ ಸದಸ್ಯತ್ವ ಬಿಟ್ಟುಕೊಟ್ಟರು.

ಸ್ವಾತಂತ್ರ್ಯೋತ್ತರ ಸಂದರ್ಭವಾದ್ದರಿಂದ ಕಾಂಗ್ರೆಸ್ ಅಲೆ ಪ್ರಚಂಡವಾಗಿದ್ದ ಆ ಕಾಲದಲ್ಲಿ ಅಂದರೆ 1952ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧೆಗಿಳಿದ ಮಲ್ಲಯ್ಯನವರ ಮೇಲೆ ಕಾಂಗ್ರೆಸ್ ಸ್ಪರ್ಧಿ ಎಚ್.ಕೆ. ವೀರಣ್ಣಗೌಡರು ಗೆದ್ದರು.

ಮಂಡ್ಯ ಜಿಲ್ಲಾ ಬೋರ್ಡ್‌ನ ಸದಸ್ಯರಾಗಿ, ಅದರ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದ ಮಲ್ಲಯ್ಯನವರು ಸಾರ್ವಜನಿಕ ಜೀವನವನ್ನು ಅತ್ಯಂತ ಶಿಸ್ತುಬದ್ಧವಾಗಿ, ವ್ಯವಸ್ಥಿತವಾಗಿ ನಿರ್ವಹಿಸಿದರು. ಥೈರಾಯಿಡ್ ಗಂಥಿ ಮತ್ತು ಮಧುಮೇಹದ ಖಾಯಿಲೆಯಿಂದಾಗಿ 1952ರ ಅಕ್ಟೋಬರ್ 5 ರಂದು ಮಲ್ಲಯ್ಯನವರು ಮದ್ರಾಸಿನಲ್ಲಿ ನಿಧನ ಹೊಂದಿದರು. ಮಲ್ಲಯ್ಯನವರ ಅಗಲುವಿಕೆಯಿಂದ ನಾಡು ಒಬ್ಬ ಪ್ರಚ್ಛನ್ನ ರಾಜಕೀಯ ಮುತ್ಸದ್ದಿಯನ್ನು ಕಳೆದುಕೊಂಡಂತೆನಿಸಿದರೂ, ಅವರ ಚಿಂತನೆಯ ಫಲದ ಸವಿಯನ್ನು ಜನತೆ ಈಗಲೂ ಸವಿಯುತ್ತಿದ್ದಾರೆ.



# ಶಿಕ್ಷಣ ರಂಗ

ಅಜ್ಞಾನದ ಅಂಧಕಾರದಲ್ಲಿ ತಲೆ ತಲಾಂತರದಿಂದಲೂ ಕುಳಿತು ತೂಕಡಿಸುತ್ತಿದ್ದ ಜನರಲ್ಲಿ ವಿದ್ಯೆಯ ಉತ್ಕೃಷ್ಟ ಬೀಜಗಳನ್ನು ಬಿತ್ತುವುದು ಮಲ್ಲಯ್ಯನವರ ನೆಚ್ಚಿನ ಕಾಯಕವಾಗಿತ್ತು. ಅಕ್ಷರ ಶಿಕ್ಷಣವನ್ನವರು ಜನಜಾಗೃತಿಯ ಪ್ರಯತ್ನದಲ್ಲೊಂದು ಪ್ರಮುಖ ಹೆಜ್ಜೆಯೆಂದೇ ಭಾವಿಸಿದ್ದರು. ಶಿಕ್ಷಣ ಒದಗಿಸುವ ಮೂಲಕ ಜನರ ಮೌಢ್ಯ ನಿರ್ಮೂಲನೆಯ ಜೊತೆಗೆ, ಔದ್ಯೋಗಿಕ ಮತ್ತಿತರ ಸಾಮಾಜಿಕ ಕ್ಷೇತ್ರಗಳಲ್ಲಿ ಅವಕಾಶಗಳನ್ನು ತೆರೆಯುವುದೂ ಅವರ ಆಲೋಚನೆಯಾಗಿತ್ತು. ಮಲ್ಲಯ್ಯನವರ ಚಿಂತನಾ ಪರಿಕ್ರಮದಲ್ಲೇ ಇದು ಆದ್ಯ ವಿಷಯವಾಗಿತ್ತು. ಪ್ರಾಥಮಿಕ ಶಾಲಾ ಶಿಕ್ಷಣದಿಂದ ಮೊದಲ್ಗೊಂಡು ವಿಶ್ವವಿದ್ಯಾನಿಲಯ ಮಟ್ಟದ ಶಿಕ್ಷಣದವರೆಗೂ ಅವರು ತಮ್ಮ ವಿಚಾರದ ಹೊನಲು ಹರಿಸಿದ್ದಾರೆ. ಆದರೂ ಅವರು ಮೊದಲು ಪ್ರಾಮುಖ್ಯತೆ ಕೊಟ್ಟಿರುವುದು ಪ್ರಾಥಮಿಕ ಶಿಕ್ಷಣ ಕ್ಷೇತ್ರಕ್ಕೇ ಎನ್ನುವುದು ಅವರ ಭಾಷಣಗಳ ಮೂಲಕ ತಿಳಿದು ಬರುತ್ತದೆ.

**ಮಕ್ಕಳನ್ನು ರುಜು ಮಾಡುವ ಸ್ಥಿತಿಯಲ್ಲೇ ನಿಲ್ಲಿಸಬೇಡಿ!**

1944ರ ಜೂನ್ ಎರಡನೆ ತಾರೀಖು ಪ್ರಜಾಪ್ರತಿನಿಧಿ ಸಭೆಯಲ್ಲಿ ಮಸೂದಾ ಕಾನೂನುಗಳನ್ನು ಪರ್ಯಾಲೋಚಿಸುವ ಸಂದರ್ಭದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಚಿಂತನೆ ಗಮನಾರ್ಹ. ಪ್ರಾಥಮಿಕ ವಿದ್ಯಾಭ್ಯಾಸದ (ತಿದ್ದುಪಡಿ) ಮಸೂದಾ ಕಾನೂನಿನ ತತ್ವ ಮತ್ತು ಸಾಮಾನ್ಯ ನಿಯಮಗಳನ್ನು ಪರ್ಯಾಲೋಚಿಸುತ್ತಾ ವಿದ್ಯಾಕ್ಷೇತ್ರಕ್ಕೆ ಪೂರಕವಾಗುವ ಅನೇಕ ಸಲಹೆ ಸೂಚನೆಗಳನ್ನು ನೀಡಿದ್ದಾರೆ.

"ಸ್ವಾಮಿ, ತಾವು ತಂದಿರತಕ್ಕ ಈ ಮಸೂದಾ ಕಾನೂನಿನಲ್ಲಿ ಕೆಲವು ವಿಷಯಗಳನ್ನು ತಮ್ಮ ಅವಗಾಹನೆಗೆ ತಂದು ಬಹಳಮಟ್ಟಿಗೆ ಈ ಸಲಹೆಯನ್ನು ಸರ್ಕಾರದವರು ಅಂಗೀಕಾರ ಮಾಡುತ್ತಾರೆಂಬ ಭರವಸೆಯ ಮೇಲೆ ಹೇಳುತ್ತೇನೆ. ಈ ಮಸೂದಾ ಕಾನೂನನ್ನು ನಮ್ಮ ಮುಂದೆ ಇಡುವಾಗ ನನಗೊಂದು ಶಂಕೆ ಬರುತ್ತದೆ. ಅದೇನೆಂದರೆ ಎಲ್ಲೆಲ್ಲಿ ಪ್ರಾಥಮಿಕ ಪಾಠಶಾಲೆಗಳಿವೆಯೋ, ಈ ಮಸೂದಾ

ಕಾನೂನಿನ ಪ್ರಕಾರ ಯಾವ ಪ್ರದೇಶದಲ್ಲಿ ಸರ್ಕಾರದವರು ಈ ಕಾನೂನನ್ನು ಜಾರಿಗೆ ತರುತ್ತಾರೆಯೋ, [illegible] 11 ವರ್ಷಕ್ಕೊಳಪಟ್ಟ ಮಕ್ಕಳನ್ನೆಲ್ಲಾ ಮೊದಲನೆಯ ತರಗತಿಯಿಂದ ನಾಲ್ಕನೆಯ ತರಗತಿಯವರೆಗೆ ಕಡ್ಡಾಯವಾಗಿ ಓದಿಸಬೇಕೆಂಬ ಮುಖ್ಯನಿಯಮವಿದೆ. ಇದರಲ್ಲಿ ನನಗೆ ತೋರುವಂತೆ ಅಲ್ಲದೆ ರಾಯಲ್ ಕಮೀಷನ್ ಆನ್ ಅಗ್ರಿಕಲ್ಚರ್ ರಿಪೋರ್ಟಿನಲ್ಲಿ ಬರೆದಿರುವಂತೆ, ಇಂಡಿಯಾ ದೇಶದಲ್ಲಿ ಮೊದಲನೆಯ ತರಗತಿಯಲ್ಲಿ ಶೇಕಡ 100 ಜನರಿದ್ದರೆ, ಅವರು ನಾಲ್ಕನೆಯ [illegible] ಶೇಕಡ 80ರಷ್ಟು ಜನರು ಬಿಟ್ಟು ಹೋಗಿ ಕೇವಲ ಶೇಕಡ 20ರಷ್ಟು ಜನರು ಮಾತ್ರ ಉಳಿಯುತ್ತಾರೆ. ಹೀಗಾಗಿ ಸರ್ಕಾರದ ಬಹಳ ಭಾಗದ ಹಣ ವ್ಯರ್ಥವಾಗುತ್ತಿದೆ. ಆದುದರಿಂದ ಈ ಕಾನೂನಿನ ಪ್ರಕಾರ ಸರ್ಕಾರದವರ ಮೇಲೆ ಒಂದು ಜವಾಬ್ದಾರಿ ಬೀಳುತ್ತದೆ. 100 ಜನರು ಮೊದಲನೆಯ ತರಗತಿಯಿಂದ ನಾಲ್ಕು ವರ್ಷಗಳ ಕಾಲ ಬಿಡದೆ ವ್ಯಾಸಂಗಮಾಡುವುದಕ್ಕೆ ಪ್ರಾರಂಭವಾದರೆ, ಅಗ್ಗೆ ಅವರಿಗೆ ತಕ್ಕ ಸ್ಥಳ ವಸತಿ ಮುಂತಾದುವನ್ನು ಒದಗಿಸುವುದಕ್ಕೆ ಸರ್ಕಾರದವರು ಮೊದಲು ಏರ್ಪಾಡು ಮಾಡಬೇಕು. ಎರಡನೆಯದಾಗಿ 100 ಮಕ್ಕಳ ವಿದ್ಯಾಭ್ಯಾಸಕ್ಕೆ ಬೇಕಾಗುವ ಉಪಾಧ್ಯಾಯರ ಸಂಖ್ಯೆಯನ್ನು ಹೆಚ್ಚು ಮಾಡಬೇಕು. ಹೀಗೆ ಪ್ರಾಥಮಿಕ ವಿದ್ಯಾಭ್ಯಾಸವನ್ನು ಹೆಚ್ಚು ಹೆಚ್ಚಾಗಿ ಪ್ರಚಾರಮಾಡಬೇಕಾದರೆ ಒಂದಂಶವನ್ನು ಗಮನದಲ್ಲಿಡಬೇಕಾಗುತ್ತದೆ. ಎಲ್ಲಿ ಹೆಚ್ಚು ಜನರು ತಾವಾಗಿ ಮುಂದೆ ಬಂದು ಸ್ಕೂಲಿಗೆ ಕಟ್ಟಡ, ಉಪಾಧ್ಯಾಯರ ವಾಸಕ್ಕೆ ಮನೆ ಕೊಡುತ್ತೇವೆಂದು ಹೇಳುತ್ತಿದ್ದಾರೆಯೋ, ಎಲ್ಲಿ ವಿಶೇಷವಾಗಿ ವಿದ್ಯಾಭ್ಯಾಸದ ಸೆಸ್ ವಸೂಲಾಗಿದೆಯೋ ಅಂಥ ಕಡೆಗಳಿಗೆಲ್ಲಾ ಇನ್ನೂ ಪ್ರೈಮರಿ ಪಾಠಶಾಲೆಗಳನ್ನು ಕೊಟ್ಟಿಲ್ಲ. ಈಗ ನಾನು ಹೇಳಿದ ಹಾಗೆ ಈ ನಿರ್ಬಂಧವಾದ ವಿದ್ಯಾಭ್ಯಾಸವನ್ನು ಕೆಲವು ಪ್ರದೇಶಗಳಲ್ಲಿ ಮಾತ್ರ ಜಾರಿಮಾಡುವ ಸಮಯದಲ್ಲಿ ಎಲ್ಲಿ ಇನ್ನೂ ಪ್ರಾಥಮಿಕ ಪಾಠಶಾಲೆಗಳಲ್ಲಿ ಕೊಟ್ಟಿಲ್ಲವೋ ಅಂತಹ ಸಂದರ್ಭಗಳಲ್ಲಿ ಹೆಚ್ಚು ಮಾಡುವ ವಿಷಯದಲ್ಲಿ ಯಾವ ವಿಧವಾದ ಅಭಿಪ್ರಾಯವೂ ಬರುವುದಿಲ್ಲವೆಂದು ನಾನು ಹೇಳುತ್ತೇನೆ.

ಎರಡನೆಯದಾಗಿ ಈಗ ತಾವು ಮಸೂದಾ ಕಾನೂನನ್ನು, ಎಲ್ಲಿ ಸರ್ಕಾರದವರು ವಿಧಾಯಕ ಮಾಡುತ್ತಾರೆಯೋ ಅಂದರೆ ಎಲ್ಲಿ ಈ ಕಾನೂನನ್ನು ಅನ್ವಯದಂತೆ ಪ್ರಕಟಪಡಿಸುತ್ತಾರೆಯೋ ಆ ಪ್ರದೇಶದಲ್ಲಿ ಮಾತ್ರ ಇದು ಜಾರಿಗೆ ಬರಬೇಕೆಂಬ ಅಂಶದಲ್ಲಿದೆ. ಆದರೆ ತಾವಿದನ್ನು ಸಾರ್ವತ್ರಿಕವಾಗಿ ನಮ್ಮ ಸಂಸ್ಥಾನದ ಎಲ್ಲಾ ಭಾಗಗಳಲ್ಲೂ ಏಕ ಕಾಲದಲ್ಲಿ ಜಾರಿಗೆ ತರಬೇಕೆಂಬುದು ನನ್ನ ಮೊದಲನೆಯ ಸಲಹೆ. ಎರಡನೆಯದಾಗಿ, ಈಗ ಈ ಬಿಲ್ಲಿನಲ್ಲಿ ತಾನಾಗಿ ಪಾಠಶಾಲೆಗೆ ಯಾವ ಮಗು ಹೋಗಿ ಸೇರುತ್ತದೆಯೋ ಆ ಮಗುವಿಗೆ ಮಾತ್ರ ಅನ್ವಯಿಸುವಂತಿದೆ. ಆದರೆ ನನ್ನ ಸಲಹೆಯೇನೆಂದರೆ, ಅದಕ್ಕೆ ಬದಲಾಗಿ ಎಲ್ಲೆಲ್ಲಿ ಪಾಠಶಾಲೆಗಳಿವೆಯೋ ಅಲ್ಲೆಲ್ಲಾ ಸ್ಕೂಲಿಗೆ ಸೇರಲಿ ಅಥವಾ ಸೇರದಿರಲಿ ಅಲ್ಲಿರುವ ಎಲ್ಲಾ ಮಕ್ಕಳೂ ನಿರ್ಧಾರವಾಗಿ ಪಾಠಶಾಲೆಗೆ ಹೋಗಿಬರುವಂತೆ ಮಾಡಬೇಕೆಂಬುದು.

ಆಮೇಲೆ ಮತ್ತೊಂದು ವಿಷಯವೇನೆಂದರೆ, ಇದರಲ್ಲಿ ಬರೀ "ಮೊದಲನೆಯ ನಾಲ್ಕು ವರ್ಷಗಳವರೆಗಾದರೂ" ಎನ್ನುವುದಕ್ಕೆ ಬದಲಾಗಿ ಕಡೆಯಪಕ್ಷ ಲೋಯರ್ ಸೆಕಂಡರಿ ತರಗತಿಯವರಿಗಾದರೂ ಹೋಗುವವರೆಗೆ" ಎಂದು ಕಾನೂನು ತಿದ್ದುಪಡಿ ಮಾಡಿದ್ದರೆ ನಾನು

ಸರ್ಕಾರದವರನ್ನು ಬಹಳವಾಗಿ ಅಭಿನಂದಿಸುತ್ತಿದ್ದೆ. ಈಗ ತಾವು ಮಾಡಿರುವುದು ಬರೀ ನಾಲ್ಕು ವರ್ಷಗಳಿಗೆ ಮಾತ್ರ. ಹೀಗೆ ಮಾಡಿರುವುದರಲ್ಲಿ ತಾವು ಒಂದು ವಿಷಯವನ್ನು ಯೋಚನೆ ಮಾಡಬೇಕು. ಈ ಬಿಲ್ಲಿನಲ್ಲಿ ಹೇಳಿರುವ ಪ್ರಕಾರ ಯಾವ ಮಕ್ಕಳೆ ಆಗಲಿ, ಹೆಣ್ಣು ಮಕ್ಕಳೆ ಆಗಲಿ, ಪ್ರೈಮರಿ ಪಾಠ ಶಾಲೆಗಳಲ್ಲಿ 4 ವರ್ಷ ಮಾತ್ರ ಓದಿ ಆಮೇಲೆ ವಿದ್ಯಾಭ್ಯಾಸವನ್ನು ಅಲ್ಲಿ ನಿಲ್ಲಿಸಿದರೆ ಆ ವಿದ್ಯಾಭ್ಯಾಸದಿಂದ ಬರಿ ರುಜು ಮಾಡುವುದಕ್ಕೆ ಬಂದಿರುತ್ತದೆಯೇ ಹೊರತು ಮತ್ತೇನು ಪ್ರಯೋಜನವಿಲ್ಲ. ನಾವೀಗ ಯಾವ ಉದ್ದೇಶದಿಂದ ಸಂಸ್ಥಾನದ ಪ್ರತಿಯೊಬ್ಬನನ್ನೂ ವಿದ್ಯಾವಂತ ನನ್ನಾಗಿ ಮಾಡಬೇಕೆಂದು ಹೇಳುತ್ತಿದ್ದೆವೆಯೋ ಆ ಉದ್ದೇಶ ನಾವು ಹೀಗೆ ಮಾಡುವುದರಿಂದ ಎಷ್ಟು ಮಾತ್ರವೂ ಸಾರ್ಥಕವಾಗುವುದಿಲ್ಲ. ಆದುದರಿಂದ ಕಡೆಯ ಪಕ್ಷ ಲೋಯರ್ ಸೆಕೆಂಡರಿ ಅಂದರೆ 7 ವರ್ಷದವರೆಗಾದರೂ ತಾವು ಬಲಾತ್ಕಾರ ವಿದ್ಯಾಭ್ಯಾಸಕ್ಕೆ ಅವಕಾಶ ಮಾಡಿದರೆ ನಿಜವಾಗಿಯೂ ಸ್ವಲ್ಪಮಟ್ಟಿಗೆ ಅದರ ಉಪಯುಕ್ತತೆ ಮಕ್ಕಳಿಗೆ ಬಂದಂತಾಗುತ್ತದೆ.

ಕೊನೆಯದಾಗಿ ಇನ್ನೊಂದು ಸಲಹೆ ಏಕೆಂದರೆ, ತಾವು "ಲಿಟರೆಸಿ" ಹೆಚ್ಚಾಗಬೇಕೆಂದು ಹೇಳಿ ಮಕ್ಕಳನ್ನು ಬರೀ ರುಜು ಮಾಡುವ ಸ್ಥಿತಿಯಲ್ಲಿಯೇ ನಿಲ್ಲಿಸಿಬಿಟ್ಟರೆ, ಅದರಿಂದ ದೇಶಕ್ಕೇ ಆಗಲಿ, ಜನರಿಗೇ ಆಗಲಿ ಏನೂ ಪ್ರಯೋಜನವಿಲ್ಲ. ಆದ್ದರಿಂದ ನಮ್ಮ ದೇಶದ ಜನರಿಗೆ ವಿದ್ಯಾಭ್ಯಾಸ ಮಾಡಿಸುವ ವಿಚಾರದ ಸಂದರ್ಭದಲ್ಲಿ, ಈಗಿನ ಕಾಲಕ್ಕೆ ಸರಿಯಾಗಿ, ಈಗಿನ ಅವಶ್ಯಕತೆಗಳಿಗೆ ಬೇಕಾಗಿರುವ ವಿದ್ಯಾಭ್ಯಾಸವನ್ನು ತಾವು ಅವರಿಗೆ ಕೊಡುವ ವಿಷಯದಲ್ಲಿ ಕೊಂಚಮಟ್ಟಿಗೆ ಏರ್ಪಾಡು ಮಾಡಬೇಕೆಂದು ಹೇಳುತ್ತೇನೆ. ಅದೇನೆಂದರೆ vocational training ಬರಿ ರುಜು ಮಾಡುವುದಕ್ಕೆ ತೋರಿಸಿಕೊಟ್ಟು ಅವನು ಅಲ್ಲಿಗೇ ತನ್ನ ವಿದ್ಯಾಭ್ಯಾಸವನ್ನು ಪೂರ್ತಿಮಾಡಿದರೆ ಏನೂ ಪ್ರಯೋಜನವಿಲ್ಲ. ಸರ್ಕಾರದವರು ಮೇಲ್ಪಟ್ಟ ವಿಷಯಗಳನ್ನೆಲ್ಲಾ ಏರ್ಪಾಡುಮಾಡುತ್ತಾರೆಂದು ನಂಬಿ ಈ ಮಸೂದಾ ಕಾನೂನಿಗೆ ಬೆಂಬಲ ಕೊಡುತ್ತೇನೆ."



1944ರ ಈ ಉದಾಹರಣೆಯೊಂದೇ ಅಲ್ಲ. ಶೈಕ್ಷಣಿಕ ಕ್ಷೇತ್ರದ ಪ್ರಗತಿಗಾಗಿ ಮಲ್ಲಯ್ಯನವರು ತೋರಿರುವ ಕಾಳಜಿಗೆ ಇನ್ನೇಷ್ಟೇ ಉದಾಹರಣೆಗಳು ದಾಖಲೆ ರೂಪದಲ್ಲಿ ಲಭ್ಯವಿದೆ. ಅವರ ನಿರಂತರ 3 ದಶಕಗಳ ರಾಜಕೀಯ ಜೀವನದಲ್ಲಿ ಅವರು ಸದನದಲ್ಲಿ ವಿದ್ಯಾಕ್ಷೇತ್ರದ ವಿಚಾರ ಪ್ರಸ್ತಾಪ ಮಾಡದೇ ಬಿಟ್ಟ ಅಧಿವೇಶನವೇ ಇಲ್ಲವೇನೋ ಎಂಬಷ್ಟು ಅಚ್ಚರಿ ಹುಟ್ಟಿಸುವ ಮಟ್ಟಿಗೆ ಅವರು ಆ ಕ್ಷೇತ್ರವನ್ನು ತಮ್ಮದಾಗಿಸಿ ಕೊಂಡಿದ್ದರು. ಪ್ರಜಾ ಪ್ರತಿನಿಧಿ ಸಭೆಯಲ್ಲಿ 1925, 1937, 1944, ನ್ಯಾಯ ವಿಧೇಯಕ ಸಭೆಯು 1935ರ ಬಜೆಟ್ ಸಂದರ್ಭಗಳಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ 1925ರಲ್ಲಿ ಅರಿಕೆ ಮೂಲಕ, 1936ರಲ್ಲಿ ಚರ್ಚೆ ಮೂಲಕ, 1937, 1942, 1944ರಲ್ಲಿ ನಿರ್ಣಯಗಳ ಮೂಲಕ, 1936ರಲ್ಲಿ ಪ್ರಶ್ನೋತ್ತರ ಕಲಾಪದಲ್ಲಿ ನ್ಯಾಯ ವಿಧೇಯಕ ಸಭೆಯಲ್ಲಿ 1928 ಮತ್ತು 1942ರಲ್ಲಿ ನಿರ್ಣಯದ ಮೂಲಕ, ಶಿಕ್ಷಣ ಕ್ಷೇತ್ರದ ಅಭಿವೃದ್ಧಿಗಾಗಿ ಅವರು ಹೋರಾಟ ನಡೆಸಿದ್ದಾರೆ. ಇವೆಲ್ಲ ಕೆಲ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ನಿಯಮಿತ ಕಾಲಮಿತಿಯೊಳಗೆ ಪ್ರಾಥಮಿಕ ಶಾಲೆಗಳನ್ನು ಆರಂಭಿಸುವ ಬಗ್ಗೆ 1928ರಲ್ಲಿ ನ್ಯಾಯ ವಿಧೇಯಕ ಸಭೆಯು ಸದಸ್ಯರಾಗಿ ಅವರು ಮಂಡಿಸಿದ ವಿಚಾರ ಲಹರಿ ಈ ಪಠ್ಯಭಾಗದಲ್ಲಿದೆ.

**ನಿಯಮಿತ ಕಾಲಮಿತಿಯಲ್ಲಿ ಶಾಲೆ ಪ್ರಾರಂಭಿಸಿ**

"This Council recommends to the Government of His Highness the Maharaja that they be pleased to open primary schools in all the village panchayats within three years from this date."

In moving the above, Mr. S.C. Mallaiya spoke in Kannada as follows:-

He said that there was no need for him to expatiate on the importance of the subject, so long as Government had accepted the principle contained in it when the matter had come up before the recent session of the Assembly. The resolution, as originally moved in the other House, he pointed out, was to the effect that primary schools should be opened in all the places with a population of 500 and more and that even there his amendment, that in every Village Panchayat such a provision should be made, was accepted. The Government in principle. He added that he was, however, disappointed to note from the draft budget of 1928-29 that no extra provision had been made for this item, and hence he considered it his duty to bring up the resolution before the Council, limiting the maximum period within which to bring about the reform to three years.

He appealed to the House to pass the resolution unanimously.

Mr. S.C. Mallaiya in thanking the Third Member of Council for the reply made on behalf of Government, reiterated the fact that his resolution contemplated the provision of schools only in each of the panchayats, which the Government could easily provide in a few years. But if Government wanted the people to wait till an additional grant of Rs. 40 lakhs is made available from the resources of the State, he said that waiting would be till the doomsday. He also deprecated the idea of entrusting the panchayats with the opening of such schools.

He drew pointed attention to the iniquitous treatment meted out to the townspeople who were securing all kinds of educational facilities without ever paying any education cess, while the villagers who were

paying the educational cess in addition to land assessment were given a step-motherly treatment. Seeing that the villagers also formed part of the loyal subjects of His Highness the Maharaja, he asked why any partiality should be shown in public dealings. Sicne it might take very long to provide each village with a school, he prayed that a beginning might be made with the panchayats by grouping together as many villages as possible.



"When the Elementary Education Regulation was introduced, we thanked the Member in charge who introduced the measure and we hoped that a millenium had dawned upon us and that all children in the rural parts would derive the blessings thereof. But what is the net result so far? Not one new school has been opened. If at all, as the Director of Public Instruction explained, there has been a reshuffling of schools and nothing better. You have not given even one additional school for each hobli. All the same you continue to levy the cess as if the object of it is being fully realised. The municipalities are not regularly contributing their quota to the local education authorities. We requested the Government to make proper arrangements in the matter. The First Member of Council assured that orders would issue soon, but though it is nearly two or three years since that assurance was given, action has not been taken in the matter. Unless a school is given to each village, there is no justification in levying the cess. It might be said that when schools are provided within a distance of 5 miles from any village, the boys of such village must go to those schools. That is not possible in all cases. The Government must either open a school in each village or discontinue collecting the cess in it.

**ಐಡುನಾಟ್‌ಸೆ ಯೂನಿವರ್ಸಿಟಿ ಈಸ್ ನಾಟ್ ವಾಂಟೆಡ್ 25.6.1936**

Some of the members seem to be more particular about encouraging University Education. I do not object to it, but the point is at what stage should encouragement be given to it. Certainly not

ಈಗ ವಿದ್ಯಾಭ್ಯಾಸದ ತೆರಿಗೆಯನ್ನು ಸರ್ಕಾರದವರು ಎಷ್ಟು ವರ್ಷದಿಂದ ವಸೂಲು ಮಾಡುತ್ತಿದ್ದಾರೆಂಬುದನ್ನು ನೋಡಿದರೆ ಸುಮಾರು 20 ವರ್ಷದಿಂದ ವಸೂಲು ಮಾಡುತ್ತಿದ್ದಾರೆಂದು ನನಗೆ ಜ್ಞಾಪಕವಿದೆ. 20 ವರ್ಷದಿಂದ ಮಾಡಿದರೂ ಕೂಡ ಈಗ ನಮಗೆ ಸ್ಕೂಲು ಕೊಡುವ ಪರಿಸ್ಥಿತಿ ಏನು? 10 ವರ್ಷ ಯಾವ ಸ್ಕೂಲುಗಳನ್ನೂ ಹೆಚ್ಚು ಮಾಡಲಿಲ್ಲ. ಈಚೆಗೆ ಸರ್ಕಾರದವರು ಸ್ಥಳೀಯ ಸಂಸ್ಥೆಗಳ ವಶದಿಂದ ಜವಾಬ್ದಾರಿಯನ್ನು ತೆಗೆದುಕೊಂಡಮೇಲೆ ವರ್ಷಕ್ಕೆ ಸರಾಸರಿ 200ರಂತೆ ನಾಲ್ಕು ವರ್ಷದ ಕಾರ್ಯಕ್ರಮ ಕೈಕೊಂಡರು. ಅನಂತರ ಈಗ ಸರಾಸರಿ 400ರಂತೆ ಸ್ಕೂಲುಗಳನ್ನು ಕೊಡಬೇಕೆಂದು ಇನ್ನೊಂದು ಕಾರ್ಯಕ್ರಮ ಮಾಡಿದ್ದಾರೆ. ಯಾವಾಗ ಸರ್ಕಾರದವರು ಒಂದು ವಿದ್ಯಾಭ್ಯಾಸ ತೆರಿಗೆಯನ್ನು ವಸೂಲು ಮಾಡುತ್ತಾರೋ ಅವರ ಪವಿತ್ರ ಕರ್ತವ್ಯ ಮತ್ತು ಜವಾಬ್ದಾರಿ ವಿದ್ಯಾಭ್ಯಾಸ ಸಲಕರಣೆಗಳನ್ನು ಒದಗಿಸುವುದು.

ಈಗ ನಮ್ಮ ದೇಶದಲ್ಲಿ ಸುಮಾರು 12 ಸಾವಿರಕ್ಕೆ ಮೇಲ್ಪಟ್ಟು ಪಂಚಾಯಿತಿಗಳಿವೆ. ಸುಮಾರು ಅರ್ಧಕ್ಕಿಂತ ಸ್ವಲ್ಪ ಕಮ್ಮಿ ಪಂಚಾಯಿತಿಗಳಲ್ಲಿ ಸ್ಕೂಲುಗಳು ಒಂದೂ ಇಲ್ಲವೆಂದು ಹೇಳಿದರೆ ಅದೇನೂ ತಪ್ಪಲ್ಲ. ನಿಮ್ಮ ಕಾರ್ಯಕ್ರಮದ ಪ್ರಕಾರ ಒಂದೊಂದು ಗ್ರಾಮಕ್ಕೆ ಒಂದೊಂದು ಸ್ಕೂಲು ಕೊಡಿಸಬೇಕೆಂದರೆ ಐವತ್ತು ಅಥವ ನೂರು ವರ್ಷವಾದರೂ ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ವಿಚಾರದಲ್ಲಿ ಸರ್ಕಾರದವರು ತಮ್ಮ ಪವಿತ್ರವಾದ ಜವಾಬ್ದಾರಿಯನ್ನು ನೆರವೇರಿಸುವುದರಲ್ಲಿ ಎಷ್ಟು ದುಡ್ಡು ಖರ್ಚಾದರೂ ಪರವಾಗಿಲ್ಲ. ಈ ಕಾರ್ಯವನ್ನು ಕೈಕೊಳ್ಳುವುದರಲ್ಲಿ ಹಿಂತೆಗೆಯಬಾರದು. ದೇವರ ದಯೆಯಿಂದ ನಮ್ಮ ದೇಶದ ಉತ್ಪತ್ತಿಯು 4 ಕೋಟಿಯಿಂದ $9^1/_2$ ಕೋಟಿ ರೂಪಾಯಿಗಳವರೆಗೆ ಹೆಚ್ಚಾಗಿದೆ. ಇಂಥ ಸಂದರ್ಭದಲ್ಲಿ ಒಂದು ಕೋಟಿ ರೂಪಾಯಿ ಖರ್ಚಾದರೂ ಚಿಂತೆಯಿಲ್ಲ. ಎಲ್ಲಾ ಕಡೆಯೂ ಸ್ಕೂಲು ಪ್ರಾರಂಭಮಾಡಿ ಎಲ್ಲರಿಗೂ ವಿದ್ಯೆ ಸಿಕ್ಕುವ ಹಾಗೆ ಧಾರಾಳವಾಗಿ ಅವಕಾಶವನ್ನು ಕಲ್ಪಿಸಿಕೊಡಬೇಕೆಂದು ಒತ್ತಾಯವಾಗಿ ಹೇಳುತ್ತೇನೆ.

ಎರಡನೆಯದಾಗಿ, ಈಗ ಪ್ರೈಮರಿ ಪಾಠಶಾಲೆಗಳು ಹೆಚ್ಚಿಸಿದುದಕ್ಕೆ ಸರಿಯಾಗಿ ಕೆಲವು ಕಡೆ ಮಿಡ್ಲ್ ಸ್ಕೂಲುಗಳ ವಿಸ್ತರಣೆಯೂ ತಕ್ಕಮಟ್ಟಿಗೆ ನಡೆದಿದೆ. ಆದರೆ ಯಾವ ರೀತಿ ಪ್ರೈಮರಿ ಸ್ಕೂಲುಗಳನ್ನು ಹೆಚ್ಚು ಮಾಡಿ ಮಿಡ್ಲ್‌ಸ್ಕೂಲುಗಳನ್ನು ಹೆಚ್ಚು ಮಾಡಿದಿರೋ, ಅದೇ ರೀತಿ ಪ್ರತಿಯೊಂದು ತಾಲ್ಲೂಕಿಗೂ ಒಂದು ಹೈಸ್ಕೂಲನ್ನಾದರೂ ಏರ್ಪಾಡು ಮಾಡಬೇಕಾದ್ದು ಅತಿ ಮುಖ್ಯವಾಗಿದೆ. ಏಕೆಂದರೆ ತಾವು ಆ ರೀತಿ ಮಿಡ್ಲ್‌ಸ್ಕೂಲುಗಳನ್ನು ಏರ್ಪಡಿಸಿದ ಮೇಲೆ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕಡೆಯಪಕ್ಷ ಹೈಸ್ಕೂಲ್ ದರ್ಜೆವರೆಗಾದರೂ ಮುಂದುವರಿಸದೆ ಹೋದರೆ ಮಾಧ್ಯಮಿಕ ವಿದ್ಯಾಭ್ಯಾಸಕ್ಕಾಗಿ ಎಷ್ಟು ಖರ್ಚುಮಾಡುತ್ತೀರೋ ಅಷ್ಟೂ ವ್ಯರ್ಥ. ಇಂಗ್ಲೀಷ್ ವಿದ್ಯಾಭ್ಯಾಸ ಸ್ವಲ್ಪ ಕಲಿತಮೇಲೆ, ಬೇರೆ ಯಾವ ಕಸಬನ್ನು ಹಿಡಿದರೂ ಸ್ವಲ್ಪವಾದರೂ ಪರಿಶ್ರಮ ಹೊಂದಿ, ಕಲಿತು ಅದನ್ನು ಉಳಿಸಿಕೊಂಡು

ಉಪಯೋಗ ಪಡೆಯಬೇಕಾದರೆ, ಕಡೇ ಪಕ್ಷ ಎಸ್.ಎಸ್.ಎಲ್.ಸಿ. ವರೆಗಾದರೂ ಓದುವುದು ಅವಶ್ಯಕವಿರುವುದರಿಂದ, ಪ್ರತಿ ತಾಲ್ಲೂಕಿಗೂ ಒಂದು ಹೈಸ್ಕೂಲು ಕೊಡಬೇಕೆಂದು ನಾನು ಕೋರುತ್ತೇನೆ.

ಮೂರನೆಯದಾಗಿ, ನಮ್ಮ ದೇಶದಲ್ಲಿ ಪಾರಿಭಾಷಿಕ ವಿದ್ಯಾಭ್ಯಾಸದ ವಿಚಾರ–ತಾವು ಈಗ ಮೆಡಿಕಲ್ ಮತ್ತು ಇಂಜನಿಯರಿಂಗ್ ಕಾಲೇಜು ಮತ್ತು ಸ್ಕೂಲು ಮುಂತಾದ ಪಾರಿಭಾಷಿಕ ಶಿಕ್ಷಣದ ಸ್ಕೂಲುಗಳನ್ನು ಪ್ರಾರಂಭಮಾಡಿದ್ದೀರಿ. ಆದರೆ ಇವುಗಳಿಗೆ ಬರತಕ್ಕ ಹುಡುಗರಿಗೆ ಏನೋ ಒಂದು ದರ್ಜೆಯ ಅರ್ಹತೆ ಇರಬೇಕೆಂದು ಇಟ್ಟುಕೊಂಡು ಎಷ್ಟೋ ಹುಡುಗರಿಗೆ ಸ್ಥಳಾವಕಾಶ ಕೊಡದಿರುವುದು ಬಹಳ ವಿಷಾದಕರ. ಇದು ನ್ಯಾಯವಾದ ನೀತಿಯಲ್ಲವೆಂದು ನಾನು ಕಡ್ಡಾಯವಾಗಿ ಹೇಳುತ್ತೇನೆ. ಇದರಿಂದ ಅನೇಕರಿಗೆ ಬಹಳ ತೊಂದರೆಯಾಗಿದೆ. ಅದರಲ್ಲೂ ಹೆಚ್ಚು ಪ್ರಜಾಬಾಹುಳ್ಯವಿರುವ ಜನಾಂಗದವರ ಪೈಕಿಯವರಿಗೆ ಸ್ಥಳ ಸಿಕ್ಕದೆ ಹೋದದ್ದು ಎಂದರೆ ಅದು ಎಷ್ಟು ಸಂಕಟಕರವಾದದ್ದು ಎಂಬುದನ್ನು ಹೇಳಬೇಕಾಗಿಲ್ಲ. ಸರ್ಕಾರದವರ ಕರ್ತವ್ಯವೇನೆಂದರೆ ಈ ಟೆಕ್ನಿಕಲ್ ಕಾಲೇಜುಗಳಿಗಾಗಲಿ ಅಥವಾ ಸ್ಕೂಲುಗಳಿಗಾಗಲೀ ಬರುವ ಮಕ್ಕಳಿಗೆ ಎಲ್ಲರಿಗೂ ಪ್ರವೇಶ ಸಮನಾಗಿ ಸಿಕ್ಕುವ ಏರ್ಪಾಡನ್ನು ಖಂಡಿತ ಮಾಡಬೇಕು. ಇನ್ನೊಂದು ವಿಚಾರವೇನೆಂದರೆ ಶ್ರೀ ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣದ ಶಾಲೆಗೆ ಬಡ್ಜೆಟ್ಟಿನಲ್ಲಿ ಈ ಸಾಲಿಗೆ ಸುಮಾರು 9 ಲಕ್ಷ ರೂಪಾಯಿಗಳನ್ನು ಒದಗಿಸಿದ್ದೀರಿ. ಹಿಂದಿನ ವರ್ಷವೂ ಸರ್ಕಾರದವರು ಅಷ್ಟು ಭಾರಿ ಮೊತ್ತವನ್ನು ಖರ್ಚು ಮಾಡಿ ನಡೆಸುತ್ತಿರುವ ಈ ಶಾಲೆಯಲ್ಲಿ ಯಾರಿಗೆ ಪ್ರವೇಶ ಸಿಕ್ಕಿತ್ತು ಎಂಬುದನ್ನು ನೋಡಿದರೆ, ಹಿಂದುಳಿದ ಕೋಮಿನವರಿಗೆ ಅನೇಕರಿಗೆ ಸಿಕ್ಕಿಲ್ಲ. ಆ ಶಾಲೆಗೆ ಬರುವ ಹುಡುಗರಿಗೆ ಮುಖ್ಯವಾಗಿರಬೇಕಾದ್ದು ತಮ್ಮ ಕಸುಬಿನಲ್ಲಿ ತಕ್ಕಷ್ಟು ಪರಿಶ್ರಮ. ಹೀಗಿರುವಾಗ ಎಸ್.ಎಸ್.ಎಲ್.ಸಿ ಎಂಬ ಬೇರೆ ಒಂದು ಅರ್ಹತೆ ಕೂಡ ಇರಬೇಕೆಂದು ಕಡ್ಡಾಯ ಮಾಡುವುದು ಸರಿಯಿಲ್ಲ. ಇದರಿಂದ ನಮ್ಮ ಹಿಂದುಳಿದವರ ಮಕ್ಕಳಿಗೆ ಅವಕಾಶ ಸಿಕ್ಕುವುದಿಲ್ಲವೆಂದು ಹೇಳಬೇಕಾಗಿದೆ. ಈಗಲೂ ಕೂಡ ಈ ವಿಶೇಷ ಅರ್ಹತೆ ಇರಬೇಕೆಂದು ಅಷ್ಟು ಹೆಚ್ಚಿಗೆ ಇಡುವುದು ಸೂಕ್ತವಲ್ಲವೆಂದು ಕೇಳಿ ಎಸ್.ಎಸ್.ಎಲ್.ಸಿ. ಎಂದು ಇರುವುದಕ್ಕೆ ಬದಲಾಗಿ ಎಸ್.ಎಸ್.ಎಲ್.ಸಿ. ಕೋರ್ಸ್ ಎಂಬುದಾಗಿಯಾದರೂ ಇರುವಂತೆ ಮಾಡಬೇಕೆಂದು ಹೇಳುತ್ತೇನೆ. ಏಕೆಂದರೆ ಸರಿಸ್ಥಾನದ ಸಾರ್ವಜನಿಕರ ಹಣದಿಂದ ನಡೆಸಲ್ಪಡುವ ಶಿಕ್ಷಣಶಾಲೆಯಲ್ಲಿ ಸರ್ಕಾರದವರು ಎಲ್ಲರಿಗೂ ಅವಕಾಶ ಸಿಕ್ಕುವಂತೆ ಮಾಡುವುದು ಅಗತ್ಯ. ಅದುದರಿಂದ ಈ ವಿಷಯವನ್ನು ಪುನಃ ವಿಮರ್ಶೆ ಮಾಡಿ ಅರ್ಹತೆ ವಿಷಯದಲ್ಲಿ ಈಗಿರುವುದಕ್ಕಿಂತ ಕಡಿಮೆ ಮಾಡಬೇಕೆಂದು ಒತ್ತಾಯ ಮಾಡುತ್ತೇನೆ."



appointed was causing inconvenience. It might be possible for deputed teachers to do some good work during vacations, but as soon as they were withdrawn and posted to their permanent places without substitutes being given for the understaffed schools, the work in such cases could not but be dislocated. The member therefore requested that the minimum staff necessary for the regular working of every school should be appointed permanently. There was a departmental circular prohibiting admission of pupils from English Middle Schools to the Upper Primary Schools. In the former schools, owing to the limited number of seats, admission was not easy to secure and if in the latter schools also they were not admitted, considerable inconvenience was bound to be caused to students in rural parts. He therefore requested that the circular be withdrawn."



**1945ರಲ್ಲಿ ಬಜೆಟ್ ಮೇಲಿನ ಭಾಷಣದಲ್ಲಿ ಮಲ್ಲಯ್ಯನವರು ಶೈಕ್ಷಣಿಕ ಕ್ಷೇತ್ರದ ಅಭಿವೃದ್ಧಿಗಾಗಿ ನೀಡಿರುವ ಇನ್ನಷ್ಟು ಸಲಹೆಗಳು**

**ವಿದ್ಯಾಭ್ಯಾಸ : ಸರ್ಕಾರದ ಪವಿತ್ರ ಕರ್ತವ್ಯ**

"ಮುಖ್ಯವಾಗಿ ಪ್ರಾಥಮಿಕ ವಿದ್ಯಾಭ್ಯಾಸವು ಯಾವ ದೇಶದ ಪ್ರಗತಿಯ ಮಟ್ಟವನ್ನು ಅಳೆಯಬೇಕಾದರೂ ಒಂದು ಮುಖ್ಯವಾದ ಅಳತೆ. ಪ್ರಾಥಮಿಕ ವಿದ್ಯಾಭ್ಯಾಸದ ಪ್ರಸಾರಣೆ ಯಾವ ದೇಶದಲ್ಲಿ ಎಷ್ಟು ಮಟ್ಟಿಗೆ ಜರುಗಿದೆ ಜನಸಾಮಾನ್ಯವು ವಿದ್ಯಾವಂತರಾಗುವುದಕ್ಕೆ ಎಷ್ಟು ಅವಕಾಶವನ್ನು ಸರ್ಕಾರದವರು ಕಲ್ಪಿಸಿ ಕೊಟ್ಟಿದ್ದಾರೆ ಎಂಬ ಅಳತೆಯಿಂದ ಒಂದು ದೇಶದ ಪ್ರಗತಿಯುನ್ನು ನಾವು ಕಂಡುಹಿಡಿಯಬೇಕಾಗಿದೆ. ಈಗ ಸರ್ಕಾರದವರು ಒದಗಿಸಿರುವ ಮೊಬಲಗಿನ ವಿಚಾರದಲ್ಲಿ ಹಿಂದಿನ ವರ್ಷದ ಆಯವ್ಯಯ ಪಟ್ಟಿಗೂ ಈ ವರ್ಷಕ್ಕೂ ಹೋಲಿಕೆ ಮಾಡಿ ನೋಡಿದರೆ ಈಗಿನ ಮೊಬಲಗು ಬಹಳ ಸ್ವಲ್ಪವೆಂದು ಹೇಳುವುದರಲ್ಲಿ ಸಂದೇಹವಿಲ್ಲ. ಆಯವ್ಯಯ ಪಟ್ಟಿಯಲ್ಲಿ ನೋಡುವುದಾದರೆ ಸುಮಾರು 4 ಲಕ್ಷ ರೂಪಾಯಿಗಳನ್ನು ಮಾತ್ರ ಪ್ರಾಥಮಿಕ ವಿದ್ಯಾಭ್ಯಾಸದ ಪ್ರಗತಿಗೆ ಒದಗಿಸಿದೆ. ಈಗ ಸರ್ಕಾರದವರು ವಿದ್ಯಾಭ್ಯಾಸ ಪ್ರಸಾರಣೆಯ ವಿಷಯದಲ್ಲಿ ಒಂದು ಜವಾಬ್ದಾರಿಯುನ್ನು ಹೊತ್ತು ಕೊಂಡಿದ್ದಾರೆ. ಏನೆಂದರೆ, ಸರ್ಕಾರದವರು ಯಾವಾಗ ಕಡ್ಡಾಯವಾಗಿ ಒಂದು ಗೊತ್ತಾದ ರೀತಿಯಲ್ಲಿ ವಿದ್ಯಾಭ್ಯಾಸದ ತೆರಿಗೆಯನ್ನು ಪ್ರತಿಯೊಬ್ಬ ಮನುಷ್ಯನಿಂದ ವಸೂಲು ಮಾಡಿದರೋ ಆಗ ವಿದ್ಯಾಭ್ಯಾಸಕ್ಕೆ ತಕ್ಕ ಅನುಕೂಲಗಳನ್ನು ಕಲ್ಪಿಸಿಕೊಡುವುದು ಸರ್ಕಾರದವರ ಪವಿತ್ರ ಕರ್ತವ್ಯ. ಒಂದು ಗೊತ್ತಾದ ಅವಧಿಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಎಲ್ಲರಿಗೂ ಸಿಕ್ಕುವಂತೆ ಮಾಡತಕ್ಕ ಜವಾಬ್ದಾರಿ ಸರ್ಕಾರದವರ ಮೇಲೆ ಬಿದ್ದಿದೆ.

I understand from my hon. Friend Mr. Ramachandra Rao Sindhia that a committee has been constituted to go into the question of vocational training and also the unemployment problem, and that the committee has submitted its recommendations. Government must consider the question of introducing vocational training as part of the system of middle school education.

There is another important thing. In as many important parts of the State as possible, Government must start Central Schools and open Kannada Lower Secondary classes in them.



**1937ರ ಜೂನ್ 15ರಂದು ನಡೆದ ಬಜೆಟ್ ಮೇಲಿನ ಸಾಮಾನ್ಯ ಚರ್ಚೆಯಲ್ಲಿ ಪಾಲ್ಗೊಂಡ ಮಲ್ಲಯ್ಯನವರ ಶಾಲೆಗಳಲ್ಲಿ ಶಿಕ್ಷಕರ ಅಭಾವವಿರುವುದನ್ನು ಅದರಿಂದ ಗ್ರಾಮೀಣ ವಿದ್ಯಾರ್ಥಿಗಳಿಗೆ ಆಗುತ್ತಿರುವ ತೊಂದರೆಯನ್ನು ಸರ್ಕಾರದ ಗಮನಕ್ಕೆ ತಂದಿದ್ದಾರೆ.**

## ಗ್ರಾಮೀಣ ಶಾಲೆಗಳಲ್ಲಿ ಶಿಕ್ಷಕರ ಅಭಾವ

"The additional allotment of Rs. 10,000 for primary education was very inadequate. In many villages, people were anxious to have schools and in some cases even buildings were ready.

Since the Government had been levying the education cess for several years past, it was their duty to provide at least one school in each hobli and to make provision in the budget to the extent necessary for the purpose. Even in places in which Schools had been opened, the accommodation and staff were quite inadequate and necessary provision should be made for increasing the same.

Mr. Malliah stated that the system of deputing teachers from one school to another when fresh teachers could not be

when primary education has spread into the villages and when all the boys and girls in the State have become literate, by all means let Government spend lavishly on University education. When millions of our people are steeped in ignorance, where is the justice in our providing lakhs of rupees for the benefit of a few fortunate people? I do not say that University is not wanted. If necessary let us have one more University. But University education should not be encouraged at the cost of primary education. When we compare the percentage of literacy in the State with the percentage in the neighbouring States. We see that our figure is very low. The reputation of Mysore as a Model State has suffered on this account. This defect should be remedied as early as possible, and until that is done the grant to the University should be kept at a minimum, and greater attention paid to the expansion of primary education.

So far as middle school education is concerned, I am pained to see that many boys are refused admission into schools for want of accommodation. All these schools are started only at taluk or hobli head-quarters, and boys have to come from very long distances, sometimes even 8 or 10 miles, but even under such conditions, many have been refused admission. If admission is not open even in middle school classes, what should become of all young boys? And what is the use of the primary education that they have received if they cannot complete even the middle school course? I request the Director of Public Instruction to enquire into the matter and see that all the pupils who have now been refused admission are given seats. I would not mind if local pupils are not given seats because they could go to some other nearest school. But these coming from long distances ought not to be refused admission.

I shall proceed to another question. This year, particularly in the Lower Secondary Examination, the percentage of passes is very low. I have known of an instance wherein out of 25 or 30 pupils sent up from one school, not even one has come out successful in the examination. This has caused great disappointment in the minds of the pupils. There

must be something wrong somewhere. Either the teachers are inefficient or the number of pupils in the lower secondary classes are more than the teachers could usefully handle. I would request the Government to enquire into the matter and take all possible action to avoid such heavy failures in future.

In the middle schools, sports and library fees are levied. The object of levying these fees is no doubt good. But library and sports facilities are often not provided. In many places there are no grounds for boys to play on and in such cases, the sports fees may be discontinued.

As regards reading room fees, lots of money have accumulated under this head, because the money collected this head, because the money collected in each year is not utilised for the purpose for which it is meant. And pupils who are unable to pay have been refused admission to the schools. Sometimes, the money collected under this head is spent for purchasing newspapers which are useful only to teachers. What is the object, for example in getting the *Daily Post* or the *Hindu* for a middle school? If at least Kannada papers are subscribed for, it would be of some use to the boys. English papers are not very necessary for middle schools. Also. the department must see how far the reading room fees could be reduced in the case of middle schools generally.

Then, there is pressing need for reorganising the courses in middle schools. The present day education is adding to unemployment. It is high time that this was stopped by suitably changing the curriculum. Already there are thousands of unemployed young men and if we do not stir ourselves into action to solve the problem, the country is sure to suffer in the near future. We must reorganise the courses of study, give the pupils vocational training and enable them to eke out their livelihood.

## ಇರ್ವಿನ್ ನಾಲೆ : ಕಾಂಟ್ರಿಬ್ಯೂಷನ್ ಕಡಿಮೆ ಮಾಡಿ

**ರೈತನ ಬದುಕು ನಿಂತಿರುವುದೇ ನೀರಾವರಿ ವ್ಯವಸ್ಥೆಯ ಮೇಲೆ, ಅದರಲ್ಲೂ ಮದ್ದೂರಿನಂಥ ಮಳೆಯಾಶ್ರಿತ ಪ್ರದೇಶದಲ್ಲಿ ಬಡ ರೈತನಿಗೆ ನೀರು ದುಬಾರಿಯಾಗಿತ್ತು. ಇರ್ವಿನ್ ನಾಲೆಯ ಕೆಳಭಾಗದ ಜಮೀನುಗಳ ಮೇಲೆ ವಿಧಿಸಿದ್ದ ಕಾಂಟ್ರಿಬ್ಯೂಷನ್ ದರವನ್ನು ಅಲ್ಲಿನ ರೈತರು ಕಟ್ಟುವ ಸ್ಥಿತಿಯಲ್ಲೂ ಇರಲಿಲ್ಲ. ಅಂಥ ಸಂದರ್ಭದಲ್ಲಿ ಮಲ್ಲಯ್ಯನವರು ಅರಿಕೆಯೊಂದರ ಮೂಲಕ ಕಾಂಟ್ರಿಬ್ಯೂಷನ್‌ದರ ಕಡಿಮೆ ಮಾಡುವಂತೆ ಈ ರೀತಿ ಮನವಿ ಮಾಡಿದ್ದಾರೆ.**

"ಮದ್ದೂರು ತಾಲ್ಲೂಕಿನಲ್ಲಿರುವ ಷಿಂಷಾನದಿಯ ಎಡದಡದ ನಾಲೆಯ ಕೆಳಗಣ ಜಮೀನುಗಳ ಮೇಲೆ ವಿಧಿಸಿರತಕ್ಕ ಕಾಂಟ್ರಿಬ್ಯೂಷನ್ ದರವು ದುಬಾರಿಯಾಗಿದೆ. ಅದುದರಿಂದ, ಕೆಳಗಣ ಜಮೀನುಗಳಮೇಲೂ ಮತ್ತು ಪ್ರತ್ಯಕ್ಷವಾಗಿ ನಾಲೆ ನೀರಿನಿಂದಲೇ ತರಿ ಸಾಗುವಳಿಯಾಗತಕ್ಕ ಜಮೀನುಗಳ ಮೇಲೂ ಇರ್ವಿನ್ ನಾಲೆಯ ಕೆಳಗಡೆ ವಿಧಾಯಕವಾಗಿರತಕ್ಕ ಕಾಂಟ್ರಿಬ್ಯೂಷನ್ ದರವನ್ನೇ ವಿಧಿಸಬೇಕೆಂದು ಪ್ರಾರ್ಥನೆ. ತಾವು ಮದ್ದೂರು ತಾಲ್ಲೂಕಿನಲ್ಲಿ ಷಿಂಷಾನದಿಯ ಎಡಗಡೆ ಇರುವ ನಾಲೆಯ ಜಮೀನುಗಳಿಗೆ ಕಾಂಟ್ರಿಬ್ಯೂಷನ್ ಮೊಬಲಗನ್ನು ವಿಧಾಯಕಮಾಡಿದ್ದೀರಿ. ಅಲ್ಲಿರುವ ಕೆರೆಗಳಿಗೆ ರೈತರು ಮೊದಲೇ ಒಂದಾವರ್ತಿ ಕಾಂಟ್ರಿಬ್ಯೂಷನ್ ಕೊಟ್ಟು ತರಿ ಕಂದಾಯವನ್ನು ಕಟ್ಟಿ ಕೊಂಡು ಬರುತ್ತಿದ್ದಾರೆ. ಅಲ್ಲಿ ನೀರಿನ ಅನುಕೂಲತೆ ಸಾಕಾದಷ್ಟು ಇಲ್ಲದೆ ಅನೇಕ ವರ್ಷಗಳು ಸರ್ಕಾರದವರು ರಿಮರ್ಷ ಕೊಡುತ್ತಿದ್ದಾರೆ. ಈಚೆಗೆ ಈ ರೀತಿಯಾಗದಂತೆ ಮಾಡುವುದಕ್ಕಾಗಿ ಈ ನಾಲೆಯನ್ನು ತೆಗೆದು ನೀರಿನ ಸೌಕರ್ಯ ಒದಗಿಸಿರುತ್ತಾರೆ. ಆದರೆ ಈ ನಾಲೆಗಾಗಿ ಎಕರೆಗೆ 80 ರೂಪಾಯಿನಂತೆ ಕಾಂಟ್ರಿಬ್ಯೂಷನ್ ವಿಧಾಯಕ ಮಾಡಿದ್ದಾರೆ ಮತ್ತು ಅದರ ಬಲಗಡೆ ಕೋಟ್ಯಾಂತರ ರೂಪಾಯಿಗಳನ್ನು ಖರ್ಚುಮಾಡಿ ತೆಗೆದಿರುವ ಇರ್ವಿನ್ ನಾಲೆಯಿಂದ ನೀರು ಉಪಯೋಗಿಸಿಕೊಳ್ಳುವವರಿಗೆ ಎಕರೆಯೊಂದಕ್ಕೆ 60 ರೂಪಾಯಿ ಕಾಂಟ್ರಿಬ್ಯೂಷನ್ ವಿಧಾಯಕಮಾಡಿದ್ದಾರೆ. ಮತ್ತು ಇರ್ವಿನ್ ನಾಲೆಯ

ಕೆಳಗಿನ ರೈತರು ವರ್ಷವೆಲ್ಲಾ ನೀರು ಇಟ್ಟುಕೊಂಡು ಕಬ್ಬು ಬೆಳೆಯುವುದಕ್ಕೂ ಮತ್ತು ಬೇರೆ ಯಾವ ಬೆಳೆ ಬೆಳೆಯುವುದಕ್ಕೂ ಅವಕಾಶವಿದೆ. ಎಡಗಡೆ ಇರುವ ನಾಲೆಯ ವಿಷಯದಲ್ಲಾದರೋ ಷಿಂಷಾನದಿಯಲ್ಲಿ ನೀರು ಇರುವಾಗ ಮಾತ್ರ ನಾಲೆಯಲ್ಲಿ ನೀರು ಇರುತ್ತದೆ. ನದಿಯಲ್ಲಿ ನೀರು ನಿಲ್ಲದೆ ಇರುವಾಗ ಇದನ್ನು ಕೊಡುವುದಕ್ಕಾಗುವುದಿಲ್ಲ. ಬೇಸಿಗೆ ಕಾಲದಲ್ಲಿ ಇವರಿಗೆ ನೀರು ಸಿಕ್ಕುವುದಿಲ್ಲ. ಸಾಮಾನ್ಯವಾಗಿ ಮಳೆಗಾಲದಲ್ಲಿ ಕೆರೆಗಳಿಗೆ ಮಳೆಯಿಂದಲೇ ಸಾಕಾದಷ್ಟು ನೀರು ಬಂದು, ನಾಲೆಯ ನೀರು ಬೇಕಾಗುವುದೇ ಇಲ್ಲ. ಹೀಗಿರುವುದರಿಂದ ತಾವು ಇರ್ವಿನ್ ನಾಲೆಯ ವಿಷಯದಲ್ಲಿ ಎಷ್ಟು ಕಾಂಟ್ರಿಬ್ಯೂಷನ್ ವಿಧಾಯಕ ಮಾಡಿದ್ದೀರೋ ಅಷ್ಟಕ್ಕಿಂತ ಕಡಿಮೆಯಾಗಿ ಇವರಿಂದ ತೆಗೆದುಕೊಳ್ಳುವುದು ನ್ಯಾಯವಾಗಿದೆ. ಅದು ಸಾಧ್ಯವಲ್ಲದ ಪಕ್ಷದಲ್ಲಿ ಈ ದರವನ್ನು ಇರಿರ್ವಿ ನಾಲಾ ಕೆಳಗಣ ಜಮೀನುಗಳ ಮೇಲೆ ವಿಧಾಯಕವಾಗಿರುವ ದರದಷ್ಟಕ್ಕಾದರೂ ಇಳಿಸಿಕೊಡಬೇಕೆಂದು ಪ್ರಾರ್ಥನೆ."



**ರೈತರಿಂದ ಬರಬೇಕಾದ ಕಂದಾಯದ ಬಾಕಿಗಾಗಿ ಅವರ ಜಮೀನನ್ನು ಹರಾಜು ಹಾಕುವುದನ್ನು ತಪ್ಪಿಸುವ ಮೂಲಕ ಬಡ ಸಾಗುವಳಿದಾರರ ಬದುಕನ್ನು ಕಷ್ಟಕ್ಕೆ ಸಿಲುಕಿಸಬಾರದೆಂದು 1944ರಲ್ಲಿ ಈ ಅರಿಕೆ ಮೂಲಕ ಮಲ್ಲಯ್ಯನವರು ಕೋರಿದ್ದಾರೆ.**

**ಹರಾಜಿಗೆ ಬಡವನ ಜಮೀನೇ ಬೇಕೆ?**

"ಈಗ ಸರ್ಕಾರದವರು ಜಮೀನು ಕಂದಾಯದ ಬಾಕಿಗೋಸ್ಕರ ಜಮೀನನ್ನು ಹರಾಜುಮಾಡಿ ಅದನ್ನು ಬೀಳಿಗೆ ಬಿಟ್ಟು ಸರ್ಕಾರಕ್ಕೆ ವಹಿಸಿಕೊಳ್ಳದ ವಾಡಿಕೆಯಿದೆ. ಈ ರೀತಿಯಾಗಿ ಹರಾಜಾಗುವುದು ಬಡಜನರ ಜಮೀನುಗಳೇ ಹೆಚ್ಚೆಂದು ನಾನು ತಿಳಿದು ಕೊಂಡಿದ್ದೇನೆ. ಇದರಿಂದ ದೇಶಕ್ಕೂ ಯಾವ ಪ್ರಯೋಜನವೂ ಆಗುವುದಿಲ್ಲ. ಸರ್ಕಾರಕ್ಕೂ ಯಾವ ಪ್ರಯೋಜನವೂ ಆಗುವುದಿಲ್ಲ. ಈಗ ಎಷ್ಟೋ ಕಡೆಗಳಲ್ಲಿ ತರಿಯಾಗಲಿ ಖುಷ್ಕಿಯಾಗಲಿ ಸಾವಿರಾರು ಎಕರೆಯಷ್ಟು ಜಮೀನು ಹಾಳು ಬಿದ್ದಿದೆ. ಸರ್ಕಾರದವರು ಕಂದಾಯದ ಬಾಕಿಗೋಸ್ಕರ ತಮ್ಮ ಸುಪರ್ದಿಗೆ ವಹಿಸಿಕೊಂಡಿದ್ದಾರೆ. ಬ್ರಿಟಿಷ್ ಇಂಡಿಯಾದಲ್ಲಿ ಅಂದರೆ ನಮ್ಮ ಪಕ್ಕದ ಮದ್ರಾಸ್ ಪ್ರಾಂತ್ಯದಲ್ಲಿ ಕಂದಾಯದ ಬಾಕಿಗೋಸ್ಕರ ಜಮೀನುಗಳನ್ನು ಹರಾಜು ಮಾಡಿ ಸರ್ಕಾರಕ್ಕೆ ಸೇರಿಸಿಕೊಳ್ಳುವುದಕ್ಕೆ ಬದಲಾಗಿ, ಫಸಲಿನಿಂದ ವಸೂಲು ಮಾಡಿಕೊಳ್ಳುವ ವಾಡಿಕೆ ಇದೆ. ಅದು ಏನೇ ಇರಲಿ, ಈ ರೀತಿ ಕಂದಾಯದ ಬಾಕಿಗೋಸ್ಕರ ಜಮೀನು ಹರಾಜು ಮಾಡುವುದರಿಂದ ಸರ್ಕಾರದ ಉದ್ದೇಶ ನೆರವೇರುವುದಿಲ್ಲ, ಜಮೀನಿನಲ್ಲಿ ಫಸಲೂ ಇಲ್ಲದೆ, ಬಾಕಿಯು ವಸೂಲಾಗದೆ, ಜಮೀನನ್ನು ಬೀಳು ಬೀಳಿಸುವುದರಿಂದ ಏನೂ ಪ್ರಯೋಜನವಿಲ್ಲ. ಇದಕ್ಕೆ ಬದಲಾಗಿ ಕಂದಾಯದ ಬಾಕಿ ಯಾರಿಂದ ಬರಬೇಕೋ ಅವನ ಸುಫರ್ದಿನಲ್ಲೆ ಜಮೀನನ್ನು ಬಿಟ್ಟು ಅದರಲ್ಲಿ ಬರುವ ಫಸಲನ್ನು ಜಪ್ತಿ ತಾವು ಮಾಡಿಯೋ, ಹರಾಜು ಮಾಡಿಯೋ ಸರ್ಕಾರಕ್ಕೆ ಬರುವ ಕಂದಾಯವನ್ನು ವಸೂಲು ಮಾಡಿಕೊಳ್ಳುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ವ್ಯವಸಾಯಗಾರರು ಜಾಸ್ತಿ ಇದ್ದು ಜಮೀನು ಕಮ್ಮಿ ಇದ್ದರೆ ಅಂತಹ ಸಂದರ್ಭಗಳಲ್ಲಿ ಪೈಪೋಟಿ

ಬಂದು ಅನೇಕರು ಜಮೀನನ್ನು ಹರಾಜಿನಲ್ಲಿ ತೆಗೆದುಕೊಳ್ಳುತ್ತಾರೆ. ಆದರೆ ನಮ್ಮ ದೇಶದಲ್ಲಿ ಲಕ್ಷಾಂತರ ಎಕರೆ ಜಮೀನನ್ನು ಸಾಗುವಳಿ ಮಾಡಲು ಜನರಿಲ್ಲದೆ ಇರುವ ನಿದರ್ಶನಗಳಿವೆ. ಈಗ ನಮಗೆ ಅವಶ್ಯಕವಿರತಕ್ಕ ಪದಾರ್ಥಗಳು ಸಾಕಾದಷ್ಟು ಬೆಳೆಯದೆ ಕಷ್ಟಪಡುತ್ತಿರುವ ವಿಷಯ ನಮ್ಮ ಮುಂದಿದೆ. ಆದ್ದರಿಂದ ಸರ್ಕಾರದವರು ಜಮೀನು ಬಂಜರು ಬೀಳುವಂತೆ ಮಾಡುವುದನ್ನು ತಪ್ಪಿಸಿದರೆ ಲಕ್ಷಾಂತರ ಎಕರೆಗಳು ಬೀಳು ಬಿದ್ದಿರುವುದು ಕಡಿಮೆಯಾಗುತ್ತದೆ. ಇರತಕ್ಕ ಅಲ್ಪ ಸ್ವಲ್ಪ ವ್ಯವಸಾಯ ಮಾಡುವ ಬಡ ಜನರು ತಮಗಿರುವ ಸ್ವಲ್ಪ ಜಮೀನನ್ನು ಸಾಗುವಳಿ ಮಾಡುವುದಕ್ಕೆ ಅನುಕೂಲವಾಗುವ ರೀತಿಯಲ್ಲಿ ಸರ್ಕಾರದವರು ನಡೆಯಬೇಕೆಂದು ನನ್ನ ಅರಿಕೆ. ಕಂದಾಯದ ಬಾಕಿಗೋಸ್ಕರ ಜಮೀನನ್ನು ಹರಾಜು ಮಾಡದೆ ಆ ಜಮೀನನ್ನು ಸಾಗುವಳಿ ಮಾಡುವವನಿಗೆ ಉಳಿಸಿ ಕಂದಾಯ ಬಾಕಿಯನ್ನು ಜಮೀನಿನಿಂದ ಬರುವ ಫಸಲಿನಿಂದ ವಸೂಲು ಮಾಡುವುದಕ್ಕೆ ಏರ್ಪಾಡು ಮಾಡಬೇಕೆಂದು ಸರ್ಕಾರದವರನ್ನು ಪ್ರಾರ್ಥಿಸುತ್ತೇನೆ."

"ಈಗ ರೆವಿನ್ಯೂ ಕಮಿಷನರವರು ರೈತನ ಹಿತ ದೃಷ್ಟಿಯಿಂದ ಮದರಾಸು ಸರ್ಕಾರದವರು ಅನುಸರಿಸುವ ಪದ್ಧತಿ ಬಹಳ ಕಠಿಣವಾದುದೆಂದು ಅಪ್ಪಣೆ ಕೊಡಿಸಿದರು. ನಮ್ಮ ದೇಶದಲ್ಲಿಯೂ ಕೂಡ ಕೆಲವು ಕಡೆ ಮನೆ ಸಾಮಾನುಗಳನ್ನೂ ದನಕರುಗಳನ್ನೂ ಕಂದಾಯದ ಬಾಕಿಗಾಗಿ ಹಿಡಿಯುವ ಪದ್ಧತಿ ಇದೆ. ಆದರೆ ಜಮೀನು ಹರಾಜು ಮಾಡುವುದೇ ಹೆಚ್ಚು. ಒಟ್ಟಿನಲ್ಲಿ ನಮ್ಮ ಸಂಸ್ಥಾನದಲ್ಲಿ ಅನುಸರಿಸುವ ಈ ಪದ್ಧತಿಯಿಂದ ರೈತರಿಗೆ ಅನಾನುಕೂಲವಾಗುತ್ತದೆ. ಹಿಡುವಳಿ ಜಮೀನು ವ್ಯವಸಾಯವಿಲ್ಲದೆ ಉಳಿಯುವುದಕ್ಕೆ ಅವಕಾಶವಾಗುತ್ತದೆ. ಸರ್ಕಾರಕ್ಕೆ ಈ ಜಮೀನು ಉಳಿಯುತ್ತದೆ. ಇಲ್ಲದಿದ್ದರೆ, ಹಣವಂತರಾದ ದೊಡ್ಡ ಜಮೀನುದಾರರಿಗೆ ಬಡ ರೈತರ ಜಮೀನುಗಳು ಸೇರಿಹೋಗುತ್ತವೆ. ಹಾಗೆ ಜಮೀನು ವ್ಯವಸಾಯ ಮಾಡಿ ಬೆಳೆ ಬೆಳೆಯುವ ರೈತರಿಗೆ ಜಮೀನು ತಪ್ಪಿಹೋಗಿ ನಮ್ಮ ದೇಶದಲ್ಲಿ ಆಹಾರ ಪದಾರ್ಥ ಬೆಳೆಯುವುದು ಕಡಿಮೆಯಾಗುತ್ತದೆ ಎಂದು ನನ್ನ ಅಭಿಪ್ರಾಯ. ಕಂದಾಯ ಕೊಡುವುದು ಜಮೀನಿಟ್ಟುಕೊಂಡು ಬೆಳೆಯುವವನ ಮುಖ್ಯ ಕರ್ತವ್ಯವೆಂಬುದನ್ನು ನಾನೂ ಒಪ್ಪುತ್ತೇನೆ. ಶ್ರೀ ಕೆ. ಸುಬ್ಬಯ್ಯ ಶೆಟ್ಟಿಯವರು ಕಂದಾಯದ ಬಾಕಿಗಾಗಿ ಫಸಲು ಸುಫರ್ದುಮಾಡಿಕೊಂಡರೆ ಬೆಳೆಯನ್ನು ಒಕ್ಕಣೆಮಾಡುವುದಕ್ಕೆ ಆಗದೆ ತೊಂದರೆಯಾಗುತ್ತದೆಂದು ಅಪ್ಪಣೆ ಕೊಡಿಸಿದರು. ಒಕ್ಕಣೆಯಾಗಿ ಸಿದ್ಧವಾದ ಫಸಲು ನಷ್ಟವಾಗಲು ಕಾರಣವೇನೂ ಇಲ್ಲ. ಒಕ್ಕಣೆಯಾಗಿ ತೆಗೆದುಕೊಂಡು ಹೋಗಲು ಸಿದ್ಧವಾಗಿರುವ ಧಾನ್ಯವನ್ನೆ ಸುಫರ್ದು ಮಾಡಿಕೊಳ್ಳಬಹುದು. ಈ ರೀತಿ ಬೆಳೆದ ಬೆಳೆಯನ್ನು ಸರ್ಕಾರದವರು ತೆಗೆದುಕೊಳ್ಳಲಿ ಅಥವಾ ಬೇರೆ ಇನ್ನಾರಿಗಾದರೂ ಮಾರಲಿ. ಕಂದಾಯ ಜಾತಬಾಕಿ ಹಣವೂ ಜಾಗ್ರತೆ ರೈತನಿಗೆ ಬರುತ್ತದೆ. ಆದುದರಿಂದ ನಾನು ಮುಖ್ಯವಾಗಿ ಹೇಳುವುದೇನೆಂದರೆ ಸ್ವಲ್ಪ ಸ್ವಲ್ಪ ಜಮೀನು ಇರುವ ಬಡ ವ್ಯವಸಾಯಗಾರರ ಹಿತ ದೃಷ್ಟಿಯಿಂದ ಈ ರೀತಿ ಕೊಡುವುದು ಬಹಳ ಒಳ್ಳೆಯದು ಬಹಳ ಒಳ್ಳೆಯದು. ಈ ಸಂದರ್ಭದಲ್ಲಿ ಸರ್ಕಾರದವರಿಗೆ ಒಂದು ಸಲಹೆ ಮಾಡುವುದೇನೆಂದರೆ ಅಜಮಾಪಿಗಾಗಿ ಸರ್ಕಾರದವರು ಈ ರೀತಿ ಮಾಡಿದರೆ ಇದರಿಂದ ಅನುಕೂಲವೋ ಅನಾನುಕೂಲವೋ ಗೊತ್ತಾಗುತ್ತದೆ. ಪರೀಕ್ಷೆಗಾಗಿ ಒಂದುಕಡೆ ಜಮೀನು ಹರಾಜು ಇನ್ನೊಂದು ಕಡೆ ಚರಸ್ವತ್ತುಗಳ ಹರಾಜು, ಮತ್ತೊಂದು ಕಡೆ ಫಸಲು ಮಾರುವುದು ಈ ರೀತಿ ಕೆಲವು ಗೊತ್ತಾದ ಕಡೆ ಮಾಡಿ ಹೋಲಿಸಿ ನೋಡಬಹುದು."



**1936ರಲ್ಲಿ ಬಜೆಟ್ ಮೇಲಿನ ಸಾಮಾನ್ಯ ಚರ್ಚೆಯಲ್ಲಿ ಪ್ರಜೆಗಳ ಪಾಲ್ಗೊಂಡು ಮಲ್ಲಯ್ಯನವರು ವ್ಯಕ್ತಪಡಿಸಿರುವ ರೈತಪರ ಆಶೋತ್ತರ ಕಾಳಜಿ ಉಲ್ಲೇಖಾರ್ಹವಾಗಿದೆ. ಈಡೇರಿಸಿ**

"ಈ ಆಯವ್ಯಯದ ಪಟ್ಟಿಯಲ್ಲಿ ಒಂದಂಶವನ್ನು ನಾನು ಬಹಳ ಜಾಗರೂಕತೆಯಿಂದ ಪರಿಶೀಲಿಸಿ ನೋಡಿದೆನು. ಈಗ ಮೊಟ್ಟ ಮೊದಲನೆಯದಾಗಿ ಮೈಸೂರು ದೇಶದಲ್ಲಿ ನಮಗೆಲ್ಲಾ ಗೊತ್ತಿರುವ ಹಾಗೆ ಆಹಾರ ಅಬಾವದ ದುಷ್ಪರಿಣಾಮವು ಎಲ್ಲರ ಕಣ್ಣೆದುರಿಗೆ ಎದ್ದು ನಿಂತಿರುತ್ತದೆ. ಇದನ್ನು ನಿವಾರಣೆ ಮಾಡಬೇಕಾದರೆ ಮುಖ್ಯವಾದ ವ್ಯವಸಾಯದ ಇಲಾಖೆಗೆ ತಾವು ಈಗ ಏನು ಮಾಡಿದ್ದೀರಿ? ಅದಕ್ಕಾಗಿ ತಾವು ಒದಗಿಸಿರುವ 50 ಲಕ್ಷ ರೂಪಾಯಿಗಳು ಈ ಆಹಾರ ಕೊರತೆಯನ್ನು ಪೂರೈಸುವುದಕ್ಕೆ ಸಾಕಾಗುತ್ತದೆಯೇ ಎಂಬುದನ್ನು ನೋಡಬೇಕಾಗಿದೆ. ಆದರೆ ತಾವು ಈ ಕೊರತೆಯನ್ನು ನಿವಾರಣೆ ಮಾಡುತ್ತೇವೆಂದು ಹೊರಗಿನವರಿಗೆ ಕೋಟ್ಯಾಂತರ ರೂಪಾಯಿ ದಂಡ ತೆರುವುದಕ್ಕಾಗಿ ಇಲ್ಲಿಯ ರೈತರ ಹೊಟ್ಟೆಯ ಮೇಲೆ ಹೊಡೆಯುತ್ತಿದ್ದೀರಿ. ಏಕೆಂದರೆ ಅದೇ ಹೊರಗಡೆಗೆ ದಂಡದ ರೂಪವಾಗಿ ತೆರುತ್ತಿರುವ ಹಣವನ್ನು ಇಲ್ಲಿಯ ರೈತರಿಗೇ ಹೆಚ್ಚು ಬೆಳೆ ಉತ್ಪತ್ತಿ ಮಾಡಲು ಅವರಿಗೆ ಹೆಚ್ಚು ಉತ್ಸಾಹವಾಗುವ ರೀತಿಯಲ್ಲಿ ಆತನು ಬೆಳೆಯತಕ್ಕ ಧಾನ್ಯಗಳಿಗೆ ಸ್ವಲ್ಪ ಹೆಚ್ಚು ಧಾರಣೆಯನ್ನು ಕೊಡಿ ಎಂದು ಹಿಂದೆಲ್ಲಾ ಕೇಳುತ್ತಿದ್ದ ನೀವೇ ಈ ದಿವಸ 10 ಲಕ್ಷ ರೂಪಾಯಿಗಳನ್ನು ಮಾತ್ರ ಖರ್ಚು ಮಾಡಿದ್ದೀರಿ. ಇದರಿಂದ ಸುಮಾರು 11 ಲಕ್ಷ ಪಲ್ಲ ಭತ್ತ ಬೆಳೆಯುವಷ್ಟು ತರೀ ಜಮೀನಿಗೂ 1/2 ಕೋಟಿ ಎಕರೆ ಖುಷ್ಕಿ ಬೆಳೆಯಾಗತಕ್ಕ 10 ಲಕ್ಷ ಎಕರೆ ಖುಷ್ಕಿ ಜಮೀನಿಗೂ ಸಾಕಾಗುವಷ್ಟು ಹಣಒದಗಿದೆಯೆ? ಈ ರೀತಿ ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡತಕ್ಕ ಸರ್ಕಾರ ಕೊರತೆ ಬೀಳುವ ಆಹಾರ ಪದಾರ್ಥಗಳನ್ನು ಇಲ್ಲಿಯೇ ನಮ್ಮ ದೇಶದ ರೈತರೇ ಬೆಳೆ ಮಾಡುವಂತೆ ಉತ್ತೇಜನವನ್ನು ಕೊಡಬಾರದೇ ಎಂಬ ಒಂದು ಶಂಕೆ ಉದ್ಭವವಾಗುವುದರಿಂದ, ಇದರ ಬಗ್ಗೆ ನಾನು ಇನ್ನು ಹೆಚ್ಚಾಗಿ ಹೇಳುವುದು

ಏನೂ ಪ್ರಯೋಜನವಿಲ್ಲ. ತಾವು ಏತಕ್ಕಾಗಿ ಈ ರೀತಿ ಮಾಡುತ್ತಿದ್ದೀರೋ ನನಗಂತೂ ಅರ್ಥವಾಗುವುದಿಲ್ಲ. ಸರ್ಕಾರಕ್ಕಿರಬೇಕಾದ ಒಂದು ಮುಖ್ಯ ಆಸಕ್ತಿ ಯಾವುದೆಂದರೆ, ಜನರಿಗೆ ಹೊಟ್ಟೆ ತುಂಬ ಅನ್ನ ಕೊಡತಕ್ಕದ್ದು. ಇದಕ್ಕಾಗಿ ಹೊರಗಿನವರಿಗೆ ಪ್ರತಿವರ್ಷವೂ 1 ಕೋಟಿ 70 ಲಕ್ಷ ರೂಪಾಯಿಗಳ ದಂಡವನ್ನು ತೆರುತ್ತಿದ್ದೀರಿ. ತಾವು ಒಂದಾವರ್ತಿ ಪರೀಕ್ಷಾರ್ಥವಾಗಿಯಾದರೂ ತಮಗೆ ಗೊತ್ತಾಗುವ ಬಗ್ಗೆ ರೈತನಿಗೆ ನಾನು ಹೇಳಿದಂತೆ ಉತ್ತೇಜನ ಕೊಟ್ಟು ನೋಡಿ. ಆತ ಹೆಚ್ಚಿಗೆ ಧಾನ್ಯ ಬೆಳೆಯುತ್ತಾನೆಯೇ ಇಲ್ಲವೇ ಎಂಬುದು ತಮಗೆ ಗೊತ್ತಾಗುತ್ತದೆ. ಹಿಂದಿದ್ದುದೇನೋ ಬೇಜವಾಬ್ದಾರಿ ಸರ್ಕಾರವೆಂದು ಹೇಳಿದರೂ, ಪ್ರಜೆಗಳ ಅಶೋತ್ತರಗಳನ್ನು ಈಡೇರಿಸುವುದಕ್ಕಾಗಿ ಸ್ಥಾಪಿತವಾಗಿದೆಯೆಂದು ಕೇಳಿಕೊಳ್ಳುತ್ತಿರುವ ಈಗಿನ ಪ್ರಜಾ ಸರ್ಕಾರ ಸಹ ಅದೇ ರೀತಿಯಲ್ಲಿ ವರ್ತಿಸುವುದು ಬಹಳ ವಿಷಾದಕರವಾದ ವಿಚಾರ."



## ಕೃಷಿ ರಂಗ

ಮಲ್ಲಯ್ಯನವರ ರೈತಪರ ಕಾಳಜಿ ಆತ್ಮೀಯವಾದುದಾಗಿತ್ತು. ಸ್ವತಃ ರೈತಾಪಿ ಕುಟುಂಬದಲ್ಲಿ ಒಬ್ಬರಾಗಿದ್ದ ಅವರಿಗೆ ರೈತನ ದೈನಂದಿನ ಸಂಕಷ್ಟಗಳು ನೇರವಾಗಿ ಅರ್ಥವಾಗುತ್ತಿದ್ದವು. ಹಾಗಾಗಿಯೇ ಅವರು ಕೃಷಿ ಕೆಲಸಗಳಿಗೆ ಅಗತ್ಯವಾದ ನೀರಾವರಿ ಸೌಲಭ್ಯ ಒದಗಿಸುವ ಬಗ್ಗೆ, ಕೃಷಿ ವಲಯಕ್ಕೆ ಸೂಕ್ತ ಹಣಕಾಸು ನೆರವು ಕಲ್ಪಿಸುವುದರ ಬಗ್ಗೆ, ರೈತರ ಕೃಷಿ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ ಪೂರೈಸುವ ಬಗ್ಗೆ, ಕೃಷಿ ಉತ್ಪನ್ನಗಳ ಮೇಲೆ ವಿಧಿಸಲಾಗುವ ಸುಂಕಗಳ ಬಗ್ಗೆ, ರೈತರ ಉಪಕಸುಬುಗಳ ಬಗ್ಗೆ, ಹೀಗೆ ಒಟ್ಟಾರೆ ಗ್ರಾಮೀಣ ಜನತೆಯ ಸೌಕರ್ಯ ಸವಲತ್ತುಗಳ ಬಗ್ಗೆ ಮಲ್ಲಯ್ಯನವರು ಗಂಭೀರ ಚಿಂತನೆ ನಡೆಸಿದ್ದಾರೆ. ರೈತಪರ ನಿಲುವಿನ ಮಲ್ಲಯ್ಯನವರ ಚಿಂತನಾಕ್ರಮಕ್ಕೆ ಹೊಗೆಸೊಪ್ಪಿನ ಮೇಲೆ ವಿಧಿಸುವ ಎಕ್ಸೈಜ್ ಸುಂಕದ ತಿದ್ದುಪಡಿ ಮಸೂದಾ ಕಾನೂನಿನ ಪರ್ಯಾಲೋಚನೆ ಚರ್ಚೆ ಒಂದು ನಿದರ್ಶನ. ಇದು 1948ರ ಮೇ 28ರಂದು ಪ್ರಜಾಪ್ರತಿನಿಧಿ ಸಭಾ ಕಲಾಪದ ಒಂದು ಪುಟ 8 ಭಾಗ ಇಂತಹ ಇನ್ನೆಷ್ಟೋ ಉದಾಹರಣೆಗಳು ಐತಿಹಾಸಿಕ ದಾಖಲೆಗಳಾಗಿ ಉಳಿದಿವೆ.

**ಈ ತೆರಿಗೆಯಿಂದ ರೈತಾಪಿ ಜನಕ್ಕೆ ತೊಂದರೆ !**

ಸ್ವಾಮಿ, ಈ ಮಸೂದಾ ಕಾನೂನಿನ ವಿಷಯದಲ್ಲಿ ಇದುವರೆವಿಗೂ ನಡೆದ ಚರ್ಚೆಯಲ್ಲಿ ಕೆಲವು ಮಾನ್ಯ ಸದಸ್ಯರು ಇದನ್ನು ವಿರೋಧಿಸಿದ್ದಾರೆ. ಈಗ ತಾನೆ ಮಾತನಾಡಿದ ಮಾನ್ಯ ಸದಸ್ಯರು ಈ ತಿದ್ದುಪಡಿ ಮಸೂದೆಗೆ ತಮ್ಮ ಸಂಪೂರ್ಣ ಬೆಂಬಲ ಕೊಟ್ಟಿದ್ದಾರೆ. ಅವರು ಮುಖ್ಯವಾಗಿ ಒಂದು ದೃಷ್ಟಿಯಿಂದ ಇದನ್ನು ಒತ್ತಾಯಮಾಡಿದರು. ಅದೇನೆಂದರೆ ಈ ತೆರಿಗೆಯಿಂದ ರೈತಾಪಿ ಜನರಿಗೆ ಏನೂ ತೊಂದರೆಯಾಗುವುದಿಲ್ಲ.

ಏನಿದ್ದರೂ ಬರೀ ಸಿಗರೇಟು, ಬೀಡಿ, ಚುಟ್ಟ, ಕಡ್ಡಿಪುಡಿ ಇತ್ಯಾದಿ ಹೊಗೆಸೊಪ್ಪಿನಿಂದ ಭೋಗವಸ್ತುಗಳ ಅಭ್ಯಾಸವಿರುವವರ ಮೇಲೆ ಬೀಳುವ ತೆರಿಗೆಯೆಂದು ಹೇಳಿದರು. ನಾನಿದನ್ನು ಖಂಡಿತ ಒಪ್ಪಲಾರೆ. ಏಕೆಂದರೆ ಈ ತೆರಿಗೆಯು ಬಹುಮಟ್ಟಿಗೆ ರೈತಾಪಿ ಜನರಿಗೆ ತೊಂದರೆಯಾಗುತ್ತದೆಂದು ತಮಗೆ ಮನದಟ್ಟು ಮಾಡಿಕೊಡಬಲ್ಲೆ. ಮಾನ್ಯ ಸಚಿವರೇನೋ ತಾವದನ್ನು ಒಪ್ಪುವುದಿಲ್ಲವೆಂದು ತಲೆ ಅಲ್ಲಾಡಿಸಿದರು. ಅದರೂ ನನ್ನ ಅಭಿಪ್ರಾಯವನ್ನು ತಮ್ಮ ಮುಂದಿಡುತ್ತೇನೆ. ಮೈಸೂರು ದೇಶದಲ್ಲಿ ಹೊಗೆಸೊಪ್ಪನ್ನು ಅಭಿವೃದ್ಧಿ ಮಾಡಬೇಕೆಂದು ಒಂದು ಕಂಪೆನಿಯನ್ನು ಸ್ಥಾಪಿಸಿ ಲಕ್ಷಾಂತರ ರೂಪಾಯಿಗಳು ಮುಳಗಿಹೋಗಿದೆಯೆಂಬುದು ಮಾನ್ಯ ಸಚಿವರಿಗೆ ತಿಳಿಯದೆ ಇಲ್ಲ. ಎಲ್ಲಾ ಕಡೆಗಳಲ್ಲೂ ಈ ಕಂಪೆನಿಯ ಕಟ್ಟಡಗಳು ದೆವ್ವಗಳ ಆಕಾರದಲ್ಲಿ ಏನೊಂದೂ ಕೆಲಸ ಮಾಡದೆ ನಿಂತಿರುವುದು ಕಾಣಬರುತ್ತದೆ. ಇದಕ್ಕೆ ಕಾರಣವೇನು? ಅಲ್ಲಿ ಸಾಕಾದಷ್ಟು ಹೊಗೆಸೊಪ್ಪು ಬೆಳೆಯದೆ ಯಾವ ಘನವಾದ ಉದ್ದೇಶದಿಂದ ಕಂಪೆನಿಯು ತಯಾರಾಯಿತೋ, ಹೊಗೆಸೊಪ್ಪನ್ನು ಹದಮಾಡಿ ಲಕ್ಷಾಂತರ ರೂಪಾಯಿಗಳನ್ನು ಸಂಪಾದನೆ ಮಾಡಬೇಕೆಂದು ಯಾವ ಆಶೆಯಿಂದ ಮಾಡಿದರೋ ಆ ಆಶೆ ನೆರವೇರಿತೇ? ರೈತಾಪಿ ಜನರಿಗೇನಾದರೂ ದುಡ್ಡು ಬಂದಿತೇ? ಈಗ ತಾವು ಸುಂಕ ಹಾಕುವುದರಿಂದ ಪರಿಣಾಮವೇನಾಗುತ್ತೆಂಬುದನ್ನು ನಾನು ಹೇಳುತ್ತಿದ್ದೇನೆ. ಪರಿಣಾಮ, ಹೊಗೆಸೊಪ್ಪಿನ ಬೆಳೆವಣಿಗೆಗೆ ಬಹಳ ಮಟ್ಟಿನ ತೊಂದರೆಯಾಗುತ್ತದೆ. ಹೇಗೆಂದರೆ, ಯಾವಾಗ ಒಂದು ಪದಾರ್ಥಕ್ಕೆ ಧಾರಣೆ ಜಾಸ್ತಿಯಾಯಿತೋ ಆಗ್ಗೆ ಪ್ರತಿಯೊಬ್ಬನೂ ತಾನು ಉಪಯೋಗಿಸುವುದನ್ನು ಕಡಿಮೆ ಮಾಡಿಕೊಳ್ಳುವುದು ಸ್ವಾಭಾವಿಕ. ಒಂದು ಸಿಗರೇಟುಪೆಟ್ಟಿಗೆ ತೆಗೆದುಕೊಳ್ಳುವವನು ಅರ್ಧತೆಗೆದುಕೊಳ್ಳುತ್ತಾನೆ; ಒಂದು ಕಟ್ಟುಬೀಡಿ ಕುಡಿಯುವವನು ಅರ್ಧಕಟ್ಟು ತೆಗೆದುಕೊಳ್ಳುವುದಿಲ್ಲ.



**ಇರ್ವಿನ್ ನಾಲಾ ಪ್ರದೇಶದಲ್ಲಿ ಹತ್ತಿ ಬೆಳೆದ ರೈತರಿಗೆ ಆದ ಲಾಭನಷ್ಟಗಳೇನು ಎನ್ನುವ ಬಗ್ಗೆ ಮಲ್ಲಯ್ಯನವರು ಸರ್ಕಾರದಿಂದ ಮಾಹಿತಿ ಪಡೆದಿದ್ದರು. 1942ರ ಅಕ್ಟೋಬರ್ 26ರಂದು ನಡೆದ ಪ್ರಶ್ನೋತ್ತರ ಸ್ವರೂಪದ ಈ ದಾಖಲೆಯನ್ನು ಒಂದು ಮಾದರಿಯಾಗಿ ಇಲ್ಲಿ ನೀಡಲಾಗಿದೆ.**

**ಹತ್ತಿ ಬೆಳೆ ಲಾಭನಷ್ಟಗಳೇನು?**

ಪ್ರಶ್ನೆ 23 – ಈ ಕೆಳಗೆ ಕೇಳಿರುವ ಸಂಗತಿಗಳನ್ನು ಸರ್ಕಾರದವರು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥನೆ:–

(ಎ) 1941–42 ನೆಯ ಇಸವಿಯಲ್ಲಿ ಇರ್ವಿನ್ ನಾಲೆಯ ಕೆಳಗಡೆ ಹತ್ತಿಯ ಫಸಲನ್ನು ಬೆಳೆದ ಜಮೀನಿನ ವಿಸ್ತೀರ್ಣವೆಷ್ಟು (ತಾಲ್ಲೂಕುವಾರು ವಿವರಗಳನ್ನು ಒದಗಿಸಬೇಕೆಂದು ಪ್ರಾರ್ಥನೆ);

(ಬಿ) ಆ ವರ್ಷಗಳಲ್ಲಿ ಹತ್ತಿಯ ಸಸಿಗಳನ್ನು ಯಾವ ಯಾವ ತಿಂಗಳಲ್ಲಿ ನಾಟಲಾಯಿತು ಮತ್ತು ಹಾಗೆ ನಾಟಿದ ಜಮೀನುಗಳ ವಿಸ್ತೀರ್ಣವೆಷ್ಟು (ತಾಲ್ಲೂಕುವಾರು ವಿವರಗಳನ್ನು ಒದಗಿಸಬೇಕೆಂದು ಪ್ರಾರ್ಥನೆ);

(ಸಿ) ಸರಾಸರಿ ಬೆಳೆದ ಹತ್ತಿಯ ಫಸಲಿನ ಪ್ರಮಾಣವೆಷ್ಟು (ಪ್ರತಿಯೊಂದು ಎಕರೆಗೆ ಮಣದ ಲೆಕ್ಕದಲ್ಲಿ ತಿಳಿಸಬೇಕೆಂದು ಪ್ರಾರ್ಥನೆ);

(ಡಿ) ನಾಟಿ ಹಾಕಿದ ಜಮೀನುಗಳಲ್ಲಿ ಪ್ರತಿಯೊಂದು ತಿಂಗಳಿನಲ್ಲಿ ಬೆಳೆದ ಹತ್ತಿಯ ಫಸಲಿನ ಸರಾಸರಿ ಪ್ರಮಾಣವೆಷ್ಟು;

(ಇ) 1942ನೆಯ ಇಸವಿ ಜುಲೈ 1ನೆಯ ತಾರೀಖಿನವರೆಗೆ ರೈತರಿಗೆ ಮಣವೊಂದಕ್ಕೆ ಯಾವ ದರದಲ್ಲಿ ಹಣ ಪಾವತಿ ಮಾಡಲಾಯಿತು;

(ಎಫ್) ರೈತರುಗಳಿಂದ ಹತ್ತಿಯನ್ನು ತೆಗೆದು ಕೊಂಡುದು ಯಾವಾಗ;

(ಜಿ) ಈ ಪ್ರದೇಶದಲ್ಲಿ ಹತ್ತಿಯನ್ನು ಬೆಳೆಯುವುದಕ್ಕಾಗಿ ತಗಲಿದ ವೆಚ್ಚವೆಷ್ಟು (1940–41 ನೆಯ ಸಾಲು ಮತ್ತು 1941–42ನೆಯ ಸಾಲುಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ವಿವರಗಳನ್ನು ಕೊಡಬೇಕೆಂದು ಪ್ರಾರ್ಥನೆ);

(ಎಚ್) 1941ನೆಯ ಇಸವಿಯಲ್ಲಿ ಕೊಂಡ ಹತ್ತಿಯ ಬೀಜಗಳ ಪರಿಣಾಮವೆಷ್ಟು ಮತ್ತು ಅವುಗಳ ಮೊಬಲಗೆಷ್ಟು;

(ಐ) ಈ ಬೀಜಗಳನ್ನು ಎಷ್ಟು ಎಕರೆಗಳಲ್ಲಿ ಬಿತ್ತಲಾಯಿತು;

(ಜೆ) ಉಪಯೋಗಿಸದೆ ಉಳಿದುಹೋದ ಬೀಜಗಳ ಪರಿಣಾಮವೆಷ್ಟು, ಮತ್ತು ಆ ಬೀಜಗಳನ್ನು ಎಷ್ಟು ಎಕರೆಗಳ ಜಮೀನಿನಲ್ಲಿ ಬಿತ್ತಬಹುದಾಗಿದ್ದಿತು;

(ಕೆ) ರೈತರಿಗೆ ಪೂರ್ತಿ ಹಣವನ್ನು ಪಾವತಿ ಮಾಡಬೇಕೆಂದು ಕೋರಿ ರೈತರ ಪರವಾಗಿ ಯಾವುದಾದರೂ ಅರಿಕೆಗಳು ಬಂದಿದ್ದುವೆ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು (ಸರ್ಕಾರದ ಜನರಲ್ ಇಲಾಖೆಯ ಸ್ಕ್ರೆಟರಿಯವರು).**

ಉತ್ತರ 23. (ಎ) ಮತ್ತು (ಬಿ) 1941ನೆಯ ಇಸವಿ ಫೆಬ್ರವರಿ ತಿಂಗಳಿನಿಂದ 1941ನೆಯ ಇಸವಿ ಮೇ ತಿಂಗಳಿನ ವರೆಗೆ 2,900 ಎಕರೆಗಳಲ್ಲಿಯೂ ಮತ್ತು 1942ನೆಯ ಇಸವಿ ಫೆಬ್ರವರಿ ತಿಂಗಳಿನಿಂದ 1942 ನೆಯ ಇಸವಿ ಏಪ್ರಿಲ್ ತಿಂಗಳಿನ ವರೆಗೆ 3,294 ಎಕರೆ 33 ಗುಂಟೆಗಳಲ್ಲಿಯೂ ಹತ್ತಿಯ ಫಸಲನ್ನು ಬೆಳೆಯಲಾಯಿತು. ಪರಿಶಿಷ್ಟದಲ್ಲಿ ಕೊಟ್ಟಿರುವ "ಎ" ಮತ್ತು "ಬಿ" ತಖ್ತೆಗಳಲ್ಲಿ ವಿವರಗಳನ್ನು ತಾಲ್ಲೂಕುವಾರಾಗಿಯೂ ಮತ್ತು ತಿಂಗಳುವಾರಾಗಿಯೂ ಕೊಡಲಾಗಿದೆ (ದಯವಿಟ್ಟು ಪರಿಶಿಷ್ಟವನ್ನು ನೋಡಿ).

(ಸಿ) ಮತ್ತು (ಡಿ) 1941ನೆಯ ಇಸವಿ ಫೆಬ್ರವರಿ ತಿಂಗಳಿನಿಂದ ಏಪ್ರಿಲ್ ತಿಂಗಳಿನವರೆಗೆ ಬಿತ್ತನೆ ಮಾಡಲಾದ ಹತ್ತಿಯ ಫಸಲಿನ ಪ್ರಮಾಣವು ಎಕರೆಯೊಂದಕ್ಕೆ ಸರಾಸರಿ 21 ಮಣಗಳು, ಫೆಬ್ರವರಿ ಮತ್ತು ಮಾರ್ಚಿ ತಿಂಗಳುಗಳಲ್ಲಿ ಬಿತ್ತನೆಯಾದ ಹತ್ತಿಯ ಫಸಲಿನ ಪ್ರಮಾಣವು ಎಕರೆಯೊಂದಕ್ಕೆ 35 ಮಣಗಳು. 1941ನೆಯ ಇಸವಿ ಮೇ ತಿಂಗಳಿನಿಂದ ಜುಲೈ ತಿಂಗಳಿನವರೆಗೆ ಬಂದ ಫಸಲಿನ ಪ್ರಮಾಣವು ಸರಾಸರಿ ಎಕರೆಯೊಂದಕ್ಕೆ 5 ಮಣಗಳಂತೆ ಲೆಕ್ಕವಾಗುತ್ತದೆ. 1942ನೆಯ ಇಸವಿ ಫೆಬ್ರವರಿ ತಿಂಗಳಿನಿಂದ ಏಪ್ರಿಲ್ ತಿಂಗಳಿನ ವರೆಗೆ ಬಂದ ಫಸಲಿನ ಸರಾಸರಿ ಪ್ರಮಾಣವೆಷ್ಟೆಂಬುದನ್ನು ಇಷ್ಟು ಶೀಘ್ರವಾಗಿ ಲೆಕ್ಕ ಹಾಕಲು ಸಾಧ್ಯವಿಲ್ಲ. ಅದಕ್ಕಿನ್ನೂ ಕಾಲಾವಕಾಶ ಬೇಕಾಗುತ್ತದೆ. ಏಕೆಂದರೆ, ಹತ್ತಿಯ ಫಸಲು ಇನ್ನೂ ಸಂಪೂರ್ಣವಾಗಿ ಬಂದಿಲ್ಲ. ಮತ್ತು ರೈತರುಗಳು ತಾವು ಬೆಳೆದ ಮಾಲನ್ನು, ಅದನ್ನು ಕೊಂಡುಕೊಳ್ಳತಕ್ಕ ಡಿಪೋಗಳಿಗೆ ಈಗತಾನೇ ಕೊಡಲು ಆರಂಭಿಸಿರುತ್ತಾರೆ. ಇಲ್ಲಿಯವರೆಗೆ ರೈತರು ಡಿಪೋಗಳಿಗೆ ಕೊಡಲಾಗಿರುವ ಹತ್ತಿಯ ಪ್ರಮಾಣದ ಮೇಲೆ ಗೊತ್ತು ಮಾಡುವುದಾದರೆ, 1942ನೆಯ ಇಸವಿ ಫೆಬ್ರುವರಿ ತಿಂಗಳಿನಿಂದ ಮಾರ್ಚಿ ತಿಂಗಳಿನವರೆಗೆ ಬಿತ್ತಿದ ಹತ್ತಿಯಿಂದ ಬಂದ ಫಸಲಿನ ಪರಿಮಾಣವು ಸರಾಸರಿ $291^1/_2$ ಮಣಗಳೆಂದು ಹೇಳಬಹುದು.

(ಇ) 1941ನೆಯ ಇಸವಿ ಫೆಬ್ರವರಿ ತಿಂಗಳಿನಿಂದ ಜುಲೈ ತಿಂಗಳಿನವರೆಗೆ ಬಿತ್ತಿದ ಹತ್ತಿಯ ಫಸಲಿಗೆ ಮಣ ಒಂದಕ್ಕೆ 2 ರೂಪಾಯಿಗಳಂತೆ ನಗದು ಮುಂಗಡವನ್ನು ಕೊಡಲಾಗಿದ್ದಿತು. ಅಖೈರಾಗಿ ಅದಕ್ಕೆ ಕೊಡಬೇಕಾದ ಬೆಲೆ ಮಣ ಒಂದಕ್ಕೆ 4 ರೂಪಾಯಿಗಳು. 1942 ನೆಯ ಇಸವಿ ಫೆಬ್ರವರಿ ತಿಂಗಳಿನಿಂದ ಏಪ್ರಿಲ್ ತಿಂಗಳಿನ ವರೆಗಿನ ಫಸಲಿಗಾಗಿ 1942ನೆಯ ಇಸವಿ ಜುಲೈ ಒಂದನೆಯ ತಾರೀಖಿನವರೆಗೆ ಯಾವ ಮುಂಗಡವನ್ನೂ ಕೊಟ್ಟಿಲ್ಲ.

(ಎಫ್) 1941ನೆಯ ಇಸವಿ ಫೆಬ್ರವರಿ ತಿಂಗಳಿನಿಂದ ಜುಲೈ ತಿಂಗಳಿನ ವರೆಗೆ ಬೆಳೆದ ಹತ್ತಿಯ ಫಸಲನ್ನು, ಅದನ್ನು ಕೊಂಡುಕೊಳ್ಳತಕ್ಕ (ಇಲಾಖೆಯ) ಡಿಪೋಗಳಿಗೆ ರೈತರುಗಳು 1941ನೆಯ ಇಸವಿ ನವೆಂಬರ್ ತಿಂಗಳಿನಲಾಗಾಯಿತು 1942ನೆಯ ಇಸವಿ ಫೆಬ್ರವರಿ ತಿಂಗಳಿನವರೆಗೆ ಒಪ್ಪಿಸಿದರು. 1942ನೆಯ ಇಸವಿ ಫೆಬ್ರವರಿ ತಿಂಗಳಿನಿಂದ ಏಪ್ರಿಲ್ ತಿಂಗಳಿನವರೆಗೆ ಬೆಳೆದ ಹತ್ತಿಯ ಫಸಲನ್ನು ಅವರು ಇನ್ನೂ ಡಿಪೋಗಳಿಗೆ ಕೊಡುತ್ತಿದ್ದಾರೆ.

(ಜಿ) 1940–41ನೆಯ ಸಾಲಿನಲ್ಲಿ ರೂ. 9,428–3–6 ಗಳು ವೆಚ್ಚವಾದುವು. 1941–42 ನೆಯ ಸಾಲಿನ ಲೆಕ್ಕಗಳು ಸಿದ್ಧವಾಗುತ್ತಿವೆ.

(ಹೆಚ್) 81,500 ಪೌಂಡುಗಳ ತೂಕದ Co- 4ನೆಯ ನಂಬರಿನ ಹತ್ತಿಯ ಬೀಜಗಳು. ಅವುಗಳ ಬೆಲೆ ರೂ. 4,941–14–7 ಈ ಬೀಜಗಳು 4,100 ಎಕರೆಗಳಿಗೆ ಬಿತ್ತಲು ಸಾಕಾಗುತ್ತವೆ.

(ಐ) ಅರ್ವಿನ್ ನಾಲಾ ಪ್ರದೇಶದಲ್ಲಿ 2,900 ಎಕರೆಗಳಲ್ಲಿಯೂ ಖುಷ್ಕಿ ಬೆಳೆ ಮಾಡತಕ್ಕ ಪ್ರದೇಶದಲ್ಲಿ 500 ಎಕರೆಗಳಲ್ಲಿಯೂ ಬಿತ್ತಲಾಯಿತು.

(ಜೆ) 16,552 ಪೌಂಡುಗಳ ತೂಕದ ಬೀಜಗಳು, ಎಂದರೆ 750 ಎಕರೆಗಳಲ್ಲಿ ಬಿತ್ತ ಬಹುದಾದಷ್ಟು.

(ಕೆ) ಇಲ್ಲ, ಬಂದಿರಲಿಲ್ಲ.

**ಶ್ರೀಮಾನ್ ಎಸ್ ಸಿ ಮಲ್ಲಯ್ಯನವರು** – ಈ ಪ್ರಶ್ನೆಯ (ಸಿ) ಭಾಗದಲ್ಲಿ "ಸರಾಸರಿ ಬೆಳೆದ ಹತ್ತಿಯ ಫಸಲಿನ ಪ್ರಮಾಣವೆಷ್ಟು" ಎಂಬುದಕ್ಕೆ ಕೊಟ್ಟಿರುವ ಉತ್ತರದಲ್ಲಿ ಮೇ ತಿಂಗಳಿನಲ್ಲಿ 987 ಎಕರೆಗಳಲ್ಲಿ ಹತ್ತಿಯನ್ನು ಬೆಳೆಯಲಾಯಿತೆಂದೂ ಆ ಸಲ ಸರಾಸರಿ ಎಕರೆಯೊಂದಕ್ಕೆ 5 ಮಣಗಳು, 1941ನೆಯ ಇಸವಿ ಫೆಬ್ರವರಿ ತಿಂಗಳಿನಿಂದ ಏಪ್ರಿಲ್ ತಿಂಗಳವರೆಗೆ ಬಿತ್ತನೆ ಮಾಡಲಾದ ಹತ್ತಿಯ ಫಸಲಿನ ಪ್ರಮಾಣವು ಎಕರೆಯೊಂದಕ್ಕೆ 21 ಮಣಗಳು, ಫೆಬ್ರವರಿ ಮತ್ತು ಮಾರ್ಚಿ ತಿಂಗಳುಗಳಲ್ಲಿ ಬಿತ್ತನೆಯಾದ ಫಸಲಿನ ಪ್ರಮಾಣವು ಎಕರೆಯೊಂದಕ್ಕೆ 35 ಮಣಗಳು ಎಂದು ಹೇಳಿದೆ. ಈ ರೀತಿಯಲ್ಲಿ ಮೇ ತಿಂಗಳಿನಲ್ಲಿ 5 ಮಣಗಳು ಮಾತ್ರ ಬಂದಿರುವುದು ಬಹಳ ಕಡಿಮೆ. ಇದಕ್ಕೆ ಕಾರಣವೇನು!

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಕಾಲಾವಧಿಯಾದ ಮೇಲೆ ಇದರ ವ್ಯವಸಾಯವನ್ನು ಪ್ರಾರಂಭಿಸಿದ್ದರಿಂದ ಅದು ಕಡಮೆಯಾಯಿತು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು**:– ಕೇವಲ 5 ಮಣಗಳಷ್ಟು ಮಾತ್ರ ಉತ್ಪತ್ತಿಯಾಗಿರುವುದರಿಂದ ರೈತನಿಗೆ ಅದರಿಂದ ಬರುವ ಮೊಬಲಗು ಕಾಂಟ್ರಿಬ್ಯೂಷನ್ ಮತ್ತು ವಾಟರ್ ರೇಟ್‌ಗಳಿಗೆ ಸಾಕಾಗುತ್ತದೆಂದು ತಾವು ತಿಳಿದಿದ್ದೀರಾ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ನನಗೆ ಅದು ಗೊತ್ತಿಲ್ಲ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಐದು ಮಣಗಳಿಗೆ ಬರುವ ಮೊಬಲಗು 20 ರೂಪಾಯಿಗಳೆಂದು ತಾವು ಒಪ್ಪಿಕೊಳ್ಳುತ್ತೀರಾ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಇರಬಹುದು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಮೊದಲನೆಯ ಸಲ ಹತ್ತಿಯನ್ನು ಬಿತ್ತನೆಗೆ ಕೊಡುವಾಗ ಅದನ್ನು ಇಂಥಾ ತಿಂಗಳಿನಲ್ಲಿ ಬೆಳೆದರೆ ಸರಿಯಾಗಿ ಫಸಲಾಗುತ್ತದೆಯೇ ಇಲ್ಲವೇ ಎಂಬುದನ್ನು ಅಜಮಾಯಿಷಿ ಮಾಡಿಕೊಡುವುದಿಲ್ಲವೇ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ರೈತರಿಗೆ ಎಲ್ಲಾ ವಿಚಾರದಲ್ಲೂ ತಿಳಿವಳಿಕೆ ಕೊಟ್ಟಿದ್ದೇವೆ. ಇದನ್ನು ಅವರು ಫೆಬ್ರವರಿ ಏಪ್ರಿಲ್ ತಿಂಗಳುಗಳೊಳಗೆ ಹಾಕಬೇಕೆಂದು ಇಲಾಖೆಯವರು ತಿಳಿಸಿದ್ದಾರೆ. ಕಾಲಾವಧಿಯ ಮೇಲೆ ಬಿತ್ತನೆ ಮಾಡಿದ್ದರೆ ಅದು ರೈತರ ಕಸೂರಿ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಮೇ, ಜೂನ್ ಮತ್ತು ಜುಲೈ ತಿಂಗಳುಗಳಲ್ಲಿ ಬಿತ್ತನೆ ಕಾಳು ಮತ್ತು ಗೊಬ್ಬರವನ್ನು ಕೊಟ್ಟರೇ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಇಲಾಖೆಯವರು ಕೊಟ್ಟಿದ್ದಾರೆ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಮೇ, ಜೂನ್ ಮತ್ತು ಜುಲೈ ತಿಂಗಳುಗಳಲ್ಲಿ ಫಸಲು ಬರುವುದಿಲ್ಲವೆಂದು ತಿಳಿದೂ ಬೀಜವನ್ನು ಕೊಟ್ಟರೇ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಮೊದಲನೆಯ ವರ್ಷವಾದ್ದರಿಂದ ಅನುಭವ ಬರುವುದಕ್ಕೋಸ್ಕರ ಬಿತ್ತನೆ ಬೀಜವನ್ನು ಕೊಟ್ಟಿರಬಹುದು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಮೇ, ಜೂನ್ ಮತ್ತು ಜುಲೈ ತಿಂಗಳುಗಳಲ್ಲಿ ನೆಟ್ಟರೆ ಪೈರು ಕಮ್ಮಿಯಾಗುತ್ತದೆಂದು ಇಲಾಖೆಯವರು ಅಜಮಾಯಿಷಿ ನಡೆಸಿರಲಿಲ್ಲವೇ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಇರ್ವಿನ್ ನಾಲಾ ಫಾರಂನಲ್ಲಿ ಇದನ್ನು ಪರೀಕ್ಷಿಸಿದ್ದೇವೆ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** –ಅಲ್ಲಿ ಉತ್ತಮವಾದ ಪರಿಣಾಮ ಬಂದಿತ್ತೇ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಈಗ ನಾನು ಅದನ್ನು ಹೇಳಲಾರೆ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಈಗ ಮೇ ತಿಂಗಳಿನಲ್ಲಿ 5 ಮಣಗಳಷ್ಟು ಮಾತ್ರ ಬಂದಿರುವುದನ್ನೂ ಹಿಂದಿನ ತಿಂಗಳುಗಳಲ್ಲಿ ಬಂದಿರುವ ಫಸಲನ್ನೂ ಹೋಲಿಸಿ ನೋಡಿದರೆ, ಮೇ ತಿಂಗಳಿನ ಫಸಲು ಬಹಳ ಕಡಮೆಯಿಂದ ಗೊತ್ತಾಗುತ್ತದೆಯೇ?

**ಶ್ರೀಮಾನ್ ಜೆ ಅಪ್ಪಾಜಿಗೌಡರು** – ಕಡಮೆಯಾಗಿದೆ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಈ ರೀತಿಯಾಗಿ ಯಾವ ಯಾವ ರೈತರಿಗೆ ಹೀಗೆ ಕಮ್ಮಿ ಫಸಲಿನಿಂದ ನಷ್ಟವಾಗಿದೆಯೋ ಅವರಿಗೆ ಏನಾದರೂ ರಿಯಾಯಿತಿ ತೋರಿಸಿದ್ದೀರಾ?

ರಾಜಮಂತ್ರ ಪ್ರವೀಣ ಕೆ.ವಿ. ಅನಂತರಾಮನ್‌ರವರು (ರೆವಿನ್ಯೂ ಮತ್ತು ಹಣಕಾಸಿನ ಸಚಿವರು) – ಇದು ಮೂರು ತಿಂಗಳ ಬೆಳೆ. ಈ ಬೆಳೆಯಾದ ಮೇಲೆ ಬಾಕಿ 9 ತಿಂಗಳುಗಳಲ್ಲಿ ಅವರು ಬೇರೆ ಬೆಳೆಗಳನ್ನು ಮಾಡಿ ನಫೆ ಹೊಂದಬಹುದು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಫೆಬ್ರವರಿ, ಏಪ್ರಿಲ್ ತಿಂಗಳುಗಳಲ್ಲಿ ಫಸಲು ಮಾಡಿದರೆ ರೈತರಿಗೆ ಸರಾಸರಿ 30 ಮಣ ಬರುತ್ತದೆಂದು ಗೊತ್ತಿರುವಾಗ ಮೇ ತಿಂಗಳಿನಲ್ಲಿ ಬಿತ್ತನೆ ಮಾಡಿದುದರಿಂದ ಸರಾಸರಿ 5 ಮಣ ಮಾತ್ರ ಬಂದರೆ ನಷ್ಟವಾದಂತಾಗುವುದಿಲ್ಲವೇ?

**ಶ್ರೀಮಾನ್ ಕೆ.ವಿ. ಅನಂತರಾಮನ್‌ರವರು** – ರೈತರು ಜಾಗ್ರತೆಯಾಗಿ ಮಾಡಲಿಲ್ಲ. ಬೀಜ ಹಾಕಬೇಕಾದರೆ ಸ್ವಲ್ಪ ಕಾಲವಾಯಿತು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಮೇ ತಿಂಗಳಿನಲ್ಲಿ ನೆಟ್ಟರೆ ಸರಿಯಾದ ಫಸಲು ಬರುವುದಿಲ್ಲವೆಂದು ರೈತರಿಗೆ ಸಲಹೆ ಕೊಟ್ಟಿದ್ದರೆ ಈ ರೀತಿಯ ನಷ್ಟಕ್ಕೆ ದಾರಿಯಾಗುತ್ತಿರಲಿಲ್ಲವಲ್ಲವೇ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಇಷ್ಟೇ ಬರುತ್ತದೆ, ಅಷ್ಟೇ ಬರುತ್ತದೆಂದು ಮೊದಲೇ ಹೇಳುವುದಕ್ಕೆ ಸಾಧ್ಯವಿಲ್ಲ. ಅವರು ಕಾಲಕಾಲಕ್ಕೆ ಸರಿಯಾಗಿ ಬೆಳೆದಿದ್ದರೆ ಹೆಚ್ಚಾಗಿ ಲಾಭ ಬರುತ್ತಿತ್ತು. ಆ ರೀತಿಯಾಗಿ ಅವರು ನೆಡಬೇಕಾಗಿತ್ತು. ಪ್ರಕೃತ ಸಂದರ್ಭದಲ್ಲಿ ಅವರು ಬಹಳ ನಿಧಾನ ಮಾಡಿದರು. ಅಲ್ಲದೆ ಇದೇ ಮೊದಲನೆಯ ವರ್ಷ, ಸ್ವಲ್ಪ ಹೆಚ್ಚು ಕಮ್ಮಿಯಾಗುವ ಸಂದರ್ಭವೊದಗುವುದರಲ್ಲಿ ಆಶ್ಚರ್ಯವಿಲ್ಲ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ನಷ್ಟ ಹೊಂದಿದವರಿಗೆ ರಿಯಾಯಿತಿ ಕೊಡುತ್ತೀರಾ?

**ಶ್ರೀಮಾನ್ ಕೆ.ವಿ. ಅನಂತರಾಮನ್‌ರವರು** – ರಿಯಾಯಿತಿಗೆ ಏನೂ ಅವಕಾಶವಿಲ್ಲ. ಏಕೆಂದರೆ ಅವರು ತೆಗೆದುಕೊಳ್ಳುವ ಬೆಳೆ ಇದೊಂದೇ ಅಲ್ಲ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಮೇ ಜೂನ್, ಜುಲೈ ತಿಂಗಳುಗಳಲ್ಲಿ ಯಾರು ಹತ್ತಿ ಫಸಲನ್ನು ಇಟ್ಟಿದ್ದರೋ ಅವರು ಆಮೇಲೆ ಇನ್ನಾವುದಾದರೂ ಫಸಲನ್ನು ಅಲ್ಲಿ ಇಟ್ಟಿದ್ದರೇ ಎಂಬುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಈಗ ಅದನ್ನು ಹೇಳುವುದಕ್ಕಾಗುವುದಿಲ್ಲ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಆ ರೀತಿ ಫಸಲಾಗದಿರುವ ಸಂದರ್ಭಗಳನ್ನು ತಿಳಿಸಿದರೆ ರಿಯಾಯಿತಿ ಕೊಡುತ್ತೀರಾ;

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ತಿಳಿಸಿದರೆ ಯೋಚನೆ ಮಾಡಬಹುದು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಮೇ, ಜೂನ್, ಜುಲೈ ತಿಂಗಳುಗಳಲ್ಲಿ ಫಸಲಿಟ್ಟರೆ, ಆ ಮೇಲೆ ಆ ವರ್ಷದ ಉಳಿದ ಭಾಗದಲ್ಲಿ ಇನ್ನೂ ಬೇರೆ ಯಾವ ಫಸಲನ್ನೂ ಇಡುವುದಕ್ಕಾಗುವುದಿಲ್ಲವೆಂದು ತಮಗೆ ಗೊತ್ತಿಲ್ಲವೇ?

**ಶ್ರೀಮಾನ್ ಕೆ.ವಿ. ಅನಂತರಾಮನ್‌ರವರು** – ನನಗೆ ತಿಳಿದಿರುವ ಮಟ್ಟಿಗೆ ಬೇರೆ ಪೈರನ್ನಿಡಬಹುದೆಂದು ಕಾಣುತ್ತದೆ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಇಲ್ಲಿ (ಎ) ಪ್ರಶ್ನೆಗೆ ಕೊಟ್ಟಿರುವ ಉತ್ತರದಲ್ಲಿ 1309 ಎಕರೆಗಳಲ್ಲಿ ಮೇ ತಿಂಗಳಿನಲ್ಲಿ ಫಸಲನ್ನು ಇಡಲಾಯಿತೆಂದು ತಿಳಿಸಿದ್ದೀರಿ. ಹೀಗೆ ಈ ಫಸಲಿಗೆ ಮೇ, ಜೂನ್, ಜುಲೈ ತಿಂಗಳುಗಳಾದ ಮೇಲೆ ಈ ವರ್ಷದಲ್ಲಿ ಇನ್ನೂ ಬೇರೆ ಫಸಲು ಬೆಳೆಯಲು ಕಾಲವಿಲ್ಲವೆಂಬುದು ತಮಗೆ ಗೊತ್ತೆ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಯಾವ ಬ್ಲಾಕಿನ ವಿಚಾರ ತಾವು ಹೇಳುತ್ತಿರುವುದು?

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಖುಷ್ಕಿ ಬ್ಲಾಕ್ ವಿಚಾರದಲ್ಲಿ.

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಅದಕ್ಕೆ ನೋಟಿಸ್ ಬೇಕು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಆ ರೈತರುಗಳಿಗೆ ನಷ್ಟವುಂಟಾಗಿದ್ದರೆ ಅವರಿಗೆ ತಕ್ಕ ರಿಯಾಯಿತಿಯನ್ನು ಕೊಡುತ್ತೀರಾ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ಅವರು ಕೇಳಿ ಕೊಳ್ಳಲಿ ನೋಡೋಣ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** – ಈ ವಿಷಯದಲ್ಲಿ ಅವರುಗಳಿಗೆ ನಿಜವಾಗಿಯೂ ತೊಂದರೆ ಸಂಭವಿಸಿದೆಯೆ ಎಂಬುದನ್ನು ಪರಿಶೀಲಿಸುವುದಕ್ಕಾಗಿ ಇನ್ನೊಂದು ಸಲ ಡೆಪ್ಯುಟಿಕಮೀಷನರವರಿಂದ ರಿಪೋರ್ಟು ತರಿಸಿಕೊಂಡು ವಿಚಾರಣೆ ಮಾಡುತ್ತೀರಾ?

**ಶ್ರೀಮಾನ್ ಜೆ. ಅಪ್ಪಾಜಿಗೌಡರು** – ನೋಡೋಣ.



ಮಂಡ್ಯ ಜಿಲ್ಲೆ ಕಬ್ಬು ಬೆಳೆಯ ತವರೂರು. ಇಲ್ಲಿ ಬೆಳೆದ ಕಬ್ಬಿನಿಂದ ಬೆಲ್ಲ ತಯಾರಿಸುವುದು ಈ ಭಾಗದ ರೈತರ ಮುಖ್ಯ ಉಪಕಸುಬಿನಂತಿತ್ತು. ಆದರೆ 1946ರಲ್ಲಿ ಬೆಲ್ಲ ತಯಾರಿಕೆ ಮೇಲೆ ಸರ್ಕಾರ ಕಡಿವಾಣ ಹಾಕುವ ಆಜ್ಞೆಯೊಂದನ್ನು ಹೊರಡಿಸಿ ಬಿಟ್ಟಿತ್ತು. ಇದರಿಂದ ಆ ಪ್ರದೇಶದ ಸುಮಾರು 450 ಎಕರೆ ಜಮೀನಿನಲ್ಲಿ ಬೆಳೆದ ಕಬ್ಬು ಸಕ್ಕರೆ ಕಂಪನಿಗೆ ಮಾತ್ರ ಪೂರೈಕೆಯಾಗಬೇಕಾಗಿತ್ತು. ಪೂರ್ವಭಾವಿ ಅನುಮತಿಯಿಂದ ಕಬ್ಬನ್ನು ಕಂಪೆನಿಯೂ ಖರೀದಿಸುವಂತಿರಲಿಲ್ಲ. ಹಾಗಾಗಿ ಕಬ್ಬು ಬೆಳೆಗಾರ ನೇರವಾಗಿ ಇಕ್ಕಳದಲ್ಲಿ ಸಿಕ್ಕಿಕೊಂಡಿದ್ದ. ಇದನ್ನು ಪ್ರಶ್ನಿಸಿ ಮಲ್ಲಯ್ಯನವರು ಸದನದಲ್ಲಿ ನಿಲುವಳಿ ಸೂಚನೆಯನ್ನೇ ಮಂಡಿಸಿದರು. ಅವರ ಭಾಷಣದ ಪೂರ್ಣ ಪಠ್ಯಭಾಗ ಇಲ್ಲಿದೆ.

**ಅವರು ಕಬ್ಬನ್ನು ಸುಟ್ಟು ಬಿಟ್ಟರು**

"ಸ್ವಾಮಿ, ನನ್ನ ನಿಲುವಳಿ ಸೂಚನೆ ಈ ರೀತಿ ಇದೆ:

"This Assembly do stand adjourned to discuss a matter of urgent public importance and of recent occurrance, viz., the situation arising out of the publication in the *Mysore Gazette* dated 18.9.46 of G.O. No. S.D. 2710-C C 51 - 46-19, under the Defence of India Rules prohibiting the manufacture of jaggery in several villages of Mandya, Maddur, Malavalli, Srirangapatam and French-Rocks Taluks of Mandya District".

ಸೆಪ್ಟೆಂಬರ್ 18ನೆಯ ತಾರೀಖಿನ ಮೈಸೂರು ಗೆಜೆಟ್ಟಿನಲ್ಲಿ ಸರ್ಕಾರದವರು ಒಂದು ಹುಕುಂ ಸಾದರು ಮಾಡಿ ಮಂಡ್ಯಾ ಜಿಲ್ಲೆಯ 5 ತಾಲ್ಲೂಕುಗಳಿಗೆ ಸೇರಿದ 454 ಗ್ರಾಮಗಳಲ್ಲಿ ಕಬ್ಬನ್ನು ಅಡಿಸಿ ಬೆಲ್ಲಮಾಡುವುದನ್ನು ನಿರೋಧಿಸಿದ್ದೀರಿ. ಆ ಆಜ್ಞೆಯ ಪ್ರಕಾರ ಕೆಲವರು ಆಹಾರ ಡೈರೆಕ್ಟರವರಿಂದ ಅಪ್ಪಣೆ ಪಡೆದು ಬೆಲ್ಲ ಮಾಡಬಹುದೆಂದು ತಿಳಿಸಿದ್ದಾರೆ. ಇದರಿಂದ ಯಾವ ರೀತಿ ತೊಂದರೆಯಾಗಿದೆಯೆಂಬುದನ್ನು ತಮಗೆ ತಿಳಿಸುತ್ತೇನೆ. ಕಳೆದ ವರ್ಷ ಭಾರತ ರಕ್ಷಣಾ ಕಾನೂನಿನ ಪ್ರಕಾರ ಇದೇ ರೀತಿಯ ಹುಕುಂ ಜಾರಿಗೆ ಬಂದಾಗ ಇದೇ ಸಭೆಯಲ್ಲ ಒಂದು ನಿಲುವಳಿ ಸೂಚನೆಯನ್ನು ಈ ಸಭೆಯ ಮುಂದೆ ತಂದು, ವಿಪುಲ ಚರ್ಚೆ ನಡೆಯಿತು. ಆಗ 450 ಹಳ್ಳಿಗಳಿಗೆ ಸೇರಿದ 450 ಎಕರೆ ಜಮೀನುಗಳಿಗೆ ಈ ಹುಕುಂ ಅನ್ವಯಿಸುವ ನಿರ್ಬಂಧವನ್ನು ಸರ್ಕಾರದವರು ಹಾಕಿದ್ದರು. ಆ 450 ಎಕರೆಗಳಲ್ಲೂ ಕಬ್ಬು ಬೆಳೆಯಲಾಗಿತ್ತು.

ಈಗಿನ ಪರಿಸ್ಥಿತಿ ಏನಾಗಿದೆಯೆಂದರೆ, ಈಗ ಜಾರಿಮಾಡಿರುವ ಹುಕುಂ ಪ್ರಕಾರ ಅದು 5 ತಾಲ್ಲೂಕುಗಳಿಗೆ ಸೇರಿದ 454 ಹಳ್ಳಿಗಳಿಗೆ ಅನ್ವಯಿಸುತ್ತದೆ. ನನಗೆ ತಿಳಿದಿರುವ ವರ್ತಮಾನದ ಪ್ರಕಾರ 45ನೆಯ ಸಾಲಿನ ಕಬ್ಬು ಇಲ್ಲವೇ ಇಲ್ಲ. ಮಂಡ್ಯಾ ತಾಲ್ಲೂಕಿನಲ್ಲಿ 100 ಎಕರೆ; ಮದ್ದೂರು ತಾಲ್ಲೂಕಿನಲ್ಲಿ 80 ಎಕರೆ; ಫ್ರೆಂಚ್‌ರಾಕ್ಸ್ ತಾಲ್ಲೂಕಿನಲ್ಲಿ ಏನೂ ಇಲ್ಲ ; ಮಳವಳ್ಳಿ ತಾಲ್ಲೂಕಿನಲ್ಲಿ 5 ಎಕರೆ; ಟಿ. ನರಸೀಪುರ ತಾಲ್ಲೂಕಿನಲ್ಲಿ 5 ಎಕರೆ ಈ ರೀತಿ ಇದೆ. ಹೀಗೆ ನೀವು ಮಳವಳ್ಳಿ ತಾಲ್ಲೂಕಿನ 29 ಹಳ್ಳಿಗಳಿಗೂ, ಟಿ. ನರಸೀಪುರ ತಾಲ್ಲೂಕಿನ 11 ಗ್ರಾಮಗಳಿಗೂ, ಫ್ರೆಂಚ್‌ರಾಕ್ಸ್ ತಾಲ್ಲೂಕಿನ 33 ಹಳ್ಳಿಗಳಿಗೂ, ಮಂಡ್ಯಾ ತಾಲ್ಲೂಕಿನ 24 ಗ್ರಾಮಗಳಿಗೂ ಮತ್ತು ಮದ್ದೂರು ತಾಲ್ಲೂಕಿನ 134 ಹಳ್ಳಿಗಳಿಗೂ, ಅನ್ವಯಿಸುವಂತೆ ಮಾಡಿದ್ದೀರಿ. ಫ್ರೆಂಚ್‌ರಾಕ್ಸ್ ತಾಲ್ಲೂಕಿನಿಂದ 45ನೆಯ ಸಾಲಿನಲ್ಲಿ ಸಕ್ಕರೆ ಕಾರ್ಖಾನೆಗೆ ಕಬ್ಬು ಸಿಗಲಿಲ್ಲ. ಹೀಗಿದ್ದರೂ ಸಹ ತಾವು ಏಕೆ ಈ ಹುಕುಂ ಜಾರಿಮಾಡಿದ್ದೀರೆಂದು ನಾನು ತಿಳಿದುಕೊಳ್ಳುವುದು ಕಷ್ಟವಾಗಿದೆ. ಹೋಗಲಿ, ಈ ರೀತಿ ಹುಕುಂ ಜಾರಿಮಾಡಿದ್ದರಿಂದ ನಮಗೆ ಸಕ್ಕರೆಯಾದರೂ ಸರಿಯಾಗಿ ಸಿಕ್ಕುತ್ತದೆಯೇ ಎಂದರೆ ಅದೂ ಇಲ್ಲ. ಆದರೆ ಒಂದು ವಿಚಾರವನ್ನು ಮರೆಯಬಾರದು. ರೈತರು ಕಬ್ಬನ್ನು ತನ್ನ ಸ್ವಂತ ಲಾಗೋಡಿನಿಂದ ಸ್ವಂತವಾಗಿ ಬೆಳೆದಿದ್ದಾರೆ. ಒಪ್ಪಿಗೆ ಕಬ್ಬು ಸಕ್ಕರೆ ಕಂಪನಿಗೆ ಕೊಡಬೇಕೆಂದು ನಿರ್ಬಂಧವಾಗಿ ಅವರುಗಳನ್ನು ಅಪ್ರತ್ಯಕ್ಷವಾಗಿ ತೊಂದರೆಗೆ ಗುರಿಪಡಿಸಿದ್ದೀರಿ. ನಾನ್‌ಒಪ್ಪಿಗೆ ಕೊಟ್ಟಿರುವುದು, ನೀರಾವರಿ ತರೀಜಮೀನುಗಳಲ್ಲಿ ; ಅದೂ ಅಲ್ಲಲ್ಲಿ ಕೊಂಚ ಕೊಂಚವಾಗಿದೆ. ಇದರಿಂದ ರೈತನಿಗೆ ಬಹಳ ತೊಂದರೆಯಾಗುತ್ತದೆ.

ಈ ಹುಕುಂ ಪ್ರಕಾರ, ರೈತ ಬೆಲ್ಲ ಮಾಡಬೇಕೆಂದರೆ. ಆಹಾರದ ಇಲಾಖೆಯ ಡೈರೆಕ್ಟರವರಿಂದ ಅಪ್ಪಣೆ ಪಡೆದು ತಯಾರಿಸಬೇಕು ಎಂದು ಹೇಳಿದೆ. ನಾನು ಅಲ್ಲಿಯವನೇ ಆದುದರಿಂದ ಒಂದು ವರ್ಷದಿಂದ ಆಗಿರುವ ಅನುಭವ ತಮ್ಮ ಗಮನಕ್ಕೆ ತರುತ್ತೇನೆ. ಒಬ್ಬ ರೈತ ತಾನು ಬೆಲ್ಲ ಮಾಡುವುದಕ್ಕೆ

ಲೈಸೆನ್ಸ್ ಪಡೆಯಬೇಕಾದರೆ, ಜಿಲ್ಲಾಧಿಕಾರಿಗಳಿಗೆ ಅರ್ಜಿ ಹಾಕಬೇಕು. ಅವರು ಸಕ್ಕರೆ ಕಂಪನಿಯವರ ಅಭಿಪ್ರಾಯವನ್ನು ಪಡೆಯಲು ಅರ್ಜಿಯನ್ನು ಅವರಿಗೆ ಕಳುಹಿಸುತ್ತಾರೆ. ಆಮೇಲೆ ಆಹಾರ ಇಲಾಖೆಯ ಡೈರೆಕ್ಟರ ಬಳಿಗೆ ಹೋಗಿ, ಪುನಃ ಜಿಲ್ಲಾಧಿಕಾರಿಗಳಿಗೆ ಬಂದು, ಆಮೇಲೆ ಅದು ರೈತನಿಗೆ ಸಿಗಬೇಕು. ಈ ಹುಕುಂಗೆ ಯಾರು ಜವಾಬ್ದಾರರೋ ಅವರು ಕೊಂಚ ಯೋಚನೆ ಮಾಡಿ ಯಾವ ಯಾವ ತಾರೀಖಿನಲ್ಲಿ ರೈತ ಅರ್ಜಿಹಾಕಿದ್ದಾನೆ ಎಂಬುದನ್ನು ಕೂಲಂಕುಷವಾಗಿ ಪರಿಶೀಲಿಸಬೇಕು. ಕೆಲವು ಸಂದರ್ಭಗಳಲ್ಲಿ ಬಹಳ ನಿಧಾನವಾಗುತ್ತದೆ. ಇದಕ್ಕೆ ಕಾರಣವನ್ನು ತಾವೇ ಊಹಿಸಬಹುದು. ಅದನ್ನು ನಾನು ವಿವರಿಸುವುದರಿಂದ ಪ್ರಯೋಜನವಿಲ್ಲ. ಈ ರೀತಿ ರೈತನಿಗೆ ದುರ್ವ್ಯಯವಾಗುತ್ತದೆ. ಇದು ತುಂಬಾ ಶೋಚನೀಯ ಮತ್ತು ವಿಷಾದಕರವಾದುದು. ಈ ಅಂಕಿ ಅಂಶಗಳ ಪ್ರಕಾರ 5 ತಾಲ್ಲೂಕಿನ 454 ಗ್ರಾಮಗಳಿಗೆ ಸೇರಿದ ಕೇವಲ 190 ಎಕರೆಗಳಿಗೆ ಮಾತ್ರ ಏಕೆ ಮಾಡಿದಿರಿ ಎಂದು ಪ್ರಶ್ನೆ ಮಾಡುತ್ತೇನೆ.

ರೈತನು ಕೆಟ್ಟರೂ ಸಕ್ಕರೆ ಕಂಪೆನಿ ಮುಂದಕ್ಕೆ ಬಂದು ಹೆಚ್ಚಾಗಿ ಲಾಭ ಬರಲಿ ಎಂಬುದು ತಮ್ಮ ಇಷ್ಟವೇ? ಈ ದಿವಸ ನೋಡಿದರೆ ಈ ಸಕ್ಕರೆ ಕಂಪನಿಯಲ್ಲಿ ಬೆಳೆಯುವವರ ಪರ ಯಾರಾದರೂ ಇದ್ದಾರೆಯೇ ಎಂದರೆ ಒಬ್ಬರೂ ಇಲ್ಲ. ಇರುವವರೆಲ್ಲಾ ಷೇರುದಾರರ ಪರವಾಗಿ, ಈ ಸಕ್ಕರೆ ಕಂಪನಿಗೆ ಆಧಾರಭೂತರಾಗಿ ಇದರಲ್ಲಿ ಇಷ್ಟು ಲಾಭ ಬರಲು ಯಾರು ಕಾರಣರೋ ಅಂಥ ರೈತನ ಪ್ರತಿನಿಧಿಗಳು ಒಬ್ಬರೂ ಇಲ್ಲ. ಹೀಗಿರುವಾಗ ನಾನ್ ಒಪ್ಪಿಗೆ ಕಬ್ಬನ್ನು ರೈತ ಯಾವ ಸಂತೋಷದಿಂದ ತಮಗೆ ಹೇಗೆ ಕೊಡಬೇಕು?

ಈಗಿನ ಪರಿಸ್ಥಿತಿಯನ್ನು ನೋಡಿದರೆ ಮೂರು ಟನ್ ಕಬ್ಬಿಗೆ ಒಂದು ಸಾವಿರ ಅಚ್ಚು ಬೆಲ್ಲ ತಯಾರಿಸಬಹುದು. ಈಗಿನ ಮಾರ್ಕೆಟ್ ದರ 250 ರೂಪಾಯಿನಿಂದ 300 ರೂಪಾಯಿನವರೆಗೆ ಬರುತ್ತದೆ. ತಾವು ಕೊಡುವ ಧಾರಣಿ ಟನ್‌ಗೆ ಕೇವಲ 24–25 ರೂಪಾಯಿ ತಾವು ಕೊಡುವ 72–75 ರೂಪಾಯಿಗೂ ಅವನು ಬೆಲ್ಲ ಮಾಡಿ ಮಾರಿದರೆ ಬರುವ 300 ರೂಪಾಯಿಗೂ ಎಷ್ಟು ವ್ಯತ್ಯಾಸವಿದೆ ತಾವೇ ನೋಡಿ.

ಇನ್ನೊಂದು ವಿಚಾರ; ಹಿಂದೆ ಬೆಲ್ಲದ ಧಾರಣೆ ಬಿದ್ದು ಹೋದಾಗ ರೈತ ಬೇಕಾದಷ್ಟು ಬೆಳೆದಿದ್ದು ನಷ್ಟ ಹೊಂದಿದೆ. ತಾನು ಬೆಳೆದ ಕಬ್ಬನ್ನು ಸಕ್ಕರೆ ಕಂಪನಿಯವರು ಕೊಂಡುಕೊಳ್ಳುವಂತೆ ಮಾಡಿ ಎಂದು ಎಷ್ಟು ಕೇಳಿಕೊಂಡರೂ ತಾವು ಮಾಡಲಿಲ್ಲ. ಆಗ ರೈತನಿಗೆ ತಾವು ಯಾವ ರೀತಿಯ ಸಹಾಯವನ್ನೂ ಮಾಡಲಿಲ್ಲ. ಕೇವಲ 12,000 ಎಕರೆ ಬೆಳೆಯನ್ನು ತಾವು ತೆಗೆದುಕೊಂಡು ಬಾಕಿಯನ್ನು ಕೊಡಿ ಎಂದು ಹೇಳಿದಿರಿ. ಅಂತಹ ಕಾಲದಲ್ಲಿ ಸಕ್ಕರೆ ಕಂಪನಿಯವರು ಸಹಾಯಮಾಡದಿರುವಾಗ ಈಗೇಕೆ ಈ ಹುಕುಂ ಜಾರಿಮಾಡಿದಿರಿ? ಯಾವಾಗ ತಾವು ರೈತರ ನೆರವಿಗೆ ಹೋಗಲಿಲ್ಲವೋ, ಆಗ ಅವರು ಕಬ್ಬನ್ನು ಸುಟ್ಟುಬಿಟ್ಟರು. ಬೆಲ್ಲಮಾಡಿದರೆ ನಷ್ಟ, ಸಕ್ಕರೆ ಕಂಪನಿಯವರು ಬೇಡವೆಂದು ತಿರಸ್ಕರಿಸಿದರು. ಅವರೇನು ಮಾಡಬೇಕು? ಸಕ್ಕರೆ ಕಂಪನಿ ಕೆಲಸಮಾಡುವುದು ವರ್ಷದಲ್ಲಿ ಕೇವಲ 8 ತಿಂಗಳು ಮಾತ್ರ ಮಿಕ್ಕ ಕಾಲದಲ್ಲಿ ವಿರಾಮವಿರುತ್ತೆ. ಇರ್ವಿನ್ ನಾಲಾ ಕೆಳಗೆ ಇರುವ ಜಮೀನುಗಳಲ್ಲಿ

ತಕ್ಷಣ ಕಟಾವು ಮಾಡಿದರೇನೇ ಮುಂದಿನ ಬೆಳೆ ಬೆಳೆಯುವುದು. ಇದು ಬಿಟ್ಟು 3–4 ತಿಂಗಳು ನಿಲ್ಲಿಸಿದರೆ ರೈತನಿಗೆ ತುಂಬಾ ನಷ್ಟವಾಗುತ್ತದೆ. ಬೆಲ್ಲ ಮಾಡುವುದಕ್ಕೆ ಇಷ್ಟವಿಲ್ಲ. ಕಂಪನಿ ಆ ಕಾಲದಲ್ಲಿ ಕೆಲಸ ಮಾಡುವುದಿಲ್ಲ. ಇದೊಂದು ದೊಡ್ಡ ತೊಂದರೆ.

ಹಿಂದೆ ಇದೇ ವಿಷಯವು ಚರ್ಚೆಯಾಗಿ ಮುಗಿದಮೇಲೆ ಆಗ ರೆವಿನ್ಯೂ ಮಂತ್ರಿಗಳಾಗಿದ್ದವರಿಗೆ ನಾವು ನಮಗೆ ಆಗಿರತಕ್ಕ ಕಷ್ಟಗಳನ್ನೆಲ್ಲಾ ತಿಳಿಸಿದಾಗ ಅವರು ಒಂದು ಸಭೆ ಏರ್ಪಾಡುಮಾಡಿದರು. ಆ ಸಭೆಗೆ ಸಕ್ಕರೆ ಕಂಪನಿ ಅಧಿಕಾರಿಗಳು ಮತ್ತು ಆಹಾರ ಶಾಖೆಯ ಅಧಿಕಾರಿಗಳೂ ಮತ್ತು ಆಹಾರ ಶಾಖೆಯ ಅಧಿಕಾರಿಗಳೂ ಮತ್ತು ರೈತರೂ ಇವರೆಲ್ಲರನ್ನೂ ಪ್ರತಿನಿಧಿಗಳಾಗಿ ಸೇರಿಸಿ ಈ ವಿಷಯುಗಳನ್ನೆಲ್ಲಾ ಕೂಲಂಕಷವಾಗಿ ಚರ್ಚೆಮಾಡಿದರು. ಅದೆಲ್ಲಾ ಆದಮೇಲೆ ಅದರ ಫಲಿತಾಂಶವೇನಾಯಿತು ಎನ್ನುವುದೇ ನಿರ್ದಿಷ್ಟವಾಗಿ ಗೊತ್ತಾಗಲಿಲ್ಲ. ಏನು ತೀರ್ಮಾನಮಾಡಬೇಕೆಂಬ ವಿಚಾರದಲ್ಲಿ ಕೆಲವು ನಿಬಂಧನೆಗಳನ್ನು ಮಾಡಬೇಕೆಂದು ಕೆಲವರು ತಿಳಿಸಿದರು. ಇನ್ನು ಕೆಲವರು ಬೆಲ್ಲಮಾಡುವುದಕ್ಕೆ ಅವಕಾಶಕೊಡಬೇಕೆಂದು ತೀರ್ಮಾನಕ್ಕೆ ಬಂದರು. ಅದರ ಪ್ರಕಾರ ಮಾಡುತ್ತೇವೆಂದು ಹೇಳಿದರು. ಆದರೆ ಆ ತೀರ್ಮಾನದ ಪ್ರಕಾರ ಕಾನೂನುಗಳನ್ನು ಎಷ್ಟರಮಟ್ಟಿಗೆ ಸಡಿಲಮಾಡಿ ರೈತರಿಗೆ ಇನ್ನೂ ಹೆಚ್ಚಿನ ಅನುಕೂಲಮಾಡಿದ್ದಾರೆ ಎಂಬ ವಿಷಯವನ್ನು ಸಾರ್ವತ್ರಿಕವಾಗಿ ಯಾವ ಘೋಷಣೆಯ ಮೂಲಕವೂ ತಿಳಿವಳಿಕೆಯನ್ನು ಕೊಟ್ಟಿಲ್ಲ. ಯಾರು ಅಪರಿಮಿತವಾಗಿ ಹೆಚ್ಚು ದುಡ್ಡು ಖರ್ಚುಮಾಡಿ ಕಷ್ಟಪಟ್ಟಿದ್ದಾರೋ ಅಂಥಾ ಕಡೆಗಳಲ್ಲಿ ಇರುವ ರೈತರಿಗೆ ಬೆಲ್ಲಮಾಡುವುದಕ್ಕೆ ಅವಕಾಶ ಸಿಕ್ಕಿತು. ಎಲ್ಲ ಆ ರೀತಿ ಮಾಡಲಿಲ್ಲವೋ ಅಲ್ಲಿ ಅವಕಾಶ ಸಿಕ್ಕಲಿಲ್ಲ.

ಆದುದರಿಂದ ನಾನು ಮೊದಲೇ ಕೊಟ್ಟಿರತಕ್ಕ ಅಂಕಿ ಅಂಶಗಳನ್ನು ಪರಿಶೀಲಿಸಿದರೆ ರೈತರಿಗೆ ಇರತಕ್ಕ ನಾನ್ ಒಪ್ಪಿಗೆ ಕಬ್ಬಿನ ಪ್ರದೇಶ ಬಹಳ ಕಡಿಮೆ. ಐದು ಎಕರೆ ಇದ್ದ ಮಾತ್ರಕ್ಕೆ ಸಕ್ಕರೆ ಕಂಪನಿಯುವರಿಗೆ ಇದರಿಂದ ಆಗತಕ್ಕ ಅನಾಹುತವಾದರೂ ಏನು? ಈ ಹುಕುಂ ಜಾರಿಯಲ್ಲಿರುವುದರಿಂದ ಹೆಚ್ಚಾಗಿ ಅನಾನುಕೂಲಗಳೂ ಮತ್ತು ವಿಶೇಷವಾಗಿ ತೊಂದರೆಯೂ ಉಂಟಾಗುತ್ತಿದೆ. ಅದುದರಿಂದ ಇದನ್ನು ಪುನರ್ವಿಮರ್ಶೆಮಾಡಿ ಜಾರಿಗೆ ಕೊಡದಂತೆ ನಿಲ್ಲಿಸಬೇಕೆಂದು ಒತ್ತಾಯಮಾಡಿ ಈ ನಿಲುವಳಿ ಸೂಚನೆಗೆ ಎಲ್ಲರೂ ಬೆಂಬಲಕೊಡುತ್ತಾರೆಂದು ನಂಬಿದ್ದೇನೆ.

ಈಗ 1945ನೆಯ ಸಾಲಿನಿಂದ ಇರುವುದು, ಈ ನಾನ್ ಒಪ್ಪಿಗೆಯ ಪ್ರದೇಶ 450 ಎಕರೆಗಳೆಂದು ತಿಳಿಸಿದ್ದೇನೆ. ಅದನ್ನು ತಾವು ಒಪ್ಪುತ್ತೀರಾ? ಅಥವಾ ತಾವು ಇದಕ್ಕೆ ಬೇರೆ ಯಾವುದಾದರೂ ಸಂಖ್ಯೆಯನ್ನು ಹೇಳುವಿರೋ?

ಈ ನಾನ್ ಒಪ್ಪಿಗೆಯ ಕಬ್ಬು ಎಷ್ಟು ಎಕರೆ ಜಮೀನಿನಲ್ಲಿ ಬೆಳೆಯಿಡಲ್ಪಟ್ಟಿದ್ದಿತು? ಯಾವ ಯಾವ ತಾಲ್ಲೂಕಿನಲ್ಲಿ ಎಷ್ಟೆಷ್ಟು ಎಕರೆ ಜಮೀನಿನಲ್ಲಿ ಬೆಳೆ ಇಟ್ಟಿತ್ತು! ನಾನು ಕೊಟ್ಟಿರುವ ಅಂಕಿ ಪ್ರಕಾರ 1945 ನೆಯ ಸಾಲಿನಲ್ಲಿ ಮಿಲ್ಲು ಮಾಡುವುದಕ್ಕೆ ಸಿದ್ದವಾಗಿದ್ದ ಕಬ್ಬು ಒಂದೂ ಇರಲಿಲ್ಲವೆಂದು ಹೇಳಿರುತ್ತೇನೆ. ಅದನ್ನು ತಾವು ಒಪ್ಪುತ್ತೀರಾ?

So far as this *oppige* cane goes there is no trouble. If there is any *non-oppige* cane which is fit for cutting then there is justification for this order. So far as my information goes, there is not a single acre of that type in French - Rocks. This order is therefore superfluous.

My point is when you issue a prohibitory order under the Defence of India Rules, there must be some basis for it. Because, the Sugar Company or the Food Department which is responsible for reviving this order must have some basis. For example, out of 5 taluks comprising of 450 villages, the area is so much and so on. If there is no such area in a particular taluk, where is the need for this order prohibiting the manufacture of jaggery?

ನಮ್ಮ ಉದ್ದೇಶವೇನೆಂದರೆ ಸರ್ಕಾರದವರು ಈ ರೀತಿಯಾದ ಒಂದು ಆಜ್ಞೆಯನ್ನು ಜಾರಿಗೆ ತರಬೇಕಾದರೆ ಅವರು ತಮ್ಮ ಎದುರಿಗೆ ಅದಕ್ಕೆ ಸಹಾಯಕವಾಗಿ ಅದನ್ನು ಬೆಂಬಲ ಮಾಡುವಂಥಾ ಅಂಕಿ ಅಂಶಗಳನ್ನು ಇಟ್ಟುಕೊಂಡು ಮಾಡಬೇಕು. ಹಾಗಿದ್ದ ಪಕ್ಷದಲ್ಲಿ ಈ ಆಜ್ಞೆಯನ್ನು ಹೊರಪಡಿಸಲು ಒಂದು ಸಲಹೆಯನ್ನು ಸರ್ಕಾರಕ್ಕೆ ಸಕ್ಕರೆ ಕಂಪನಿಯವರು ಕೊಟ್ಟರೋ ಅಥವಾ ಆಹಾರ ಸರಬರಾಯಿ ಶಾಖೆಯ ಅಧ್ಯಕ್ಷರು ಕೊಟ್ಟರೋ ಎನ್ನುವುದು ಬೇಕಾಗಿದೆ. ಇದೂ ಅಲ್ಲದೆ ಈ ವಿಚಾರವಾಗಿ ಏನಾದರೂ ಯಾರಿಗಾದರೂ ಅರ್ಜಿ ಬಂದಿತ್ತೆ? ಹೀಗೇನಾದರೂ ಇದ್ದರೆ ಆ ರೀತಿ ಎಷ್ಟೆಷ್ಟು ಎಕರೆ ನಾನ್ ಒಪ್ಪಿಗೆಯ ಕಬ್ಬು ಮಂಡ್ಯಾ, ಮದ್ದೂರು ಮಳವಳ್ಳಿ, ಟಿ. ನರಸೀಪುರ ಮತ್ತು ಫ್ರೆಂಚ್‌ರಾಕ್ಸ್ ತಾಲ್ಲೂಕುಗಳಲ್ಲಿ ಇರುತ್ತೆ? ಹೀಗೆ ಈ ನಾನ್ ಒಪ್ಪಿಗೆಯ ಕಬ್ಬು ಇರುತ್ತೆ ಎಂಬ ಅಂಕಿ ಅಂಶಗಳನ್ನು ತಮ್ಮ ಎದುರಿಗೆ ಇಟ್ಟುಕೊಂಡು, ಆ ರೀತಿ ಕಬ್ಬು ಮಿಲ್ಲು ಮಾಡಲು ಅನುಕೂಲವಿತ್ತು, ಎಂಬ ಈ ಅಂಶಗಳನ್ನೆಲ್ಲಾ ವಿಮರ್ಶೆಮಾಡಿ ಈ ಕಾರಣಗಳಿಗಾಗಿ ಈ ಆಜ್ಞೆಯು ಜಾರಿಯಲ್ಲಿ ಇರಲೇಬೇಕೆಂಬುದಕ್ಕೆ ಅವಕಾಶವಿರುತ್ತೆ ಎಂದು ಹೊರಪಟ್ಟರೆ ಆಗ ಮಾತ್ರ ಇಂಥಾ ಆಜ್ಞೆಯನ್ನು ಜಾರಿಮಾಡಬಹುದಾಗಿದ್ದಿತು. ಇದರ ಮೇಲೆ ತಾವು ಯಾವ ಕಾರ್ಯಕ್ರಮಗಳನ್ನು ನಡೆಸಬಹುದಾಗಿತ್ತು? ಈಗ ನಮ್ಮ ತಿಳುವಳಿಕೆಯ ಪ್ರಕಾರ ಈ ಸ್ಥಳಗಳಲ್ಲಿರುವ 450 ಎಕರೆ ಜಮೀನಿನಲ್ಲಿ ಕಟಾವು ಮಾಡಿ ಮಿಲ್ಲು ಮಾಡುವಂಥಾ ಅಥವ ಬೆಳೆಯಿಟ್ಟದ್ದಂಥಾ ಜಮೀನೇ ಯಾವುದೂ ಇರುವುದಿಲ್ಲ. ಹೀಗಿದ್ದಾಗ್ಯೂ ತಾವು ಇಂಥಾ ಒಂದು ಆಜ್ಞೆಯನ್ನು ಆ ಪ್ರದೇಶದಲ್ಲಿ ಜಾರಿಗೆ ತರಲು ಅದರಲ್ಲಿ ತಮ್ಮ ಉದ್ದೇಶವೇನು? ಇದರಿಂದ ಏನು ಉಪಯೋಗ? ಇದರ ಅರ್ಥವಾದರೂ ಏನು? ಈ 54 ಗ್ರಾಮಗಳಲ್ಲಿರುವವರೆಗೆ ಇದರಿಂದ ತಾವು ಏನು ಉಪಕಾರ ಮಾಡಿದ್ದೀರಿ?

ಸ್ವಾಮಿ, ಮೊದಲನೆಯದಾಗಿ ಈ ನಿಲುವಳಿ ಸೂಚನೆಗೆ ಬೆಂಬಲಕೊಟ್ಟ ಮಹನೀಯರಿಗೆ ನಾನು ಬಹಳವಾಗಿ ವಂದಿಸುತ್ತೇನೆ. ಸರ್ಕಾರದ ಪರವಾಗಿ ಈ ಸೂಚನೆಗೆ ಉತ್ತರವನ್ನು ಮಂತ್ರಿಗಳು ಕೊಡುವಾಗ ಮುಖ್ಯವಾಗಿ ನಾನ್ ಒಪ್ಪಿಗೆ ಕಬ್ಬನ್ನು ಬೆಲ್ಲ ತಯಾರುಮಾಡುವುದಕ್ಕೆ ಅವಕಾಶ ಕೊಡಬೇಕೆಂದು ಬಂದ ಅರ್ಜಿಗಳ ಸಂಬಂಧದಲ್ಲಿ ತೀರ್ಮಾನ ನಿಧಾನವಾಗಿದೆ, ಈ ರೀತಿ ನಿಧಾನವಾಗಲು ಅಸ್ಪದವಿಲ್ಲದಂತೆ ಮಾಡುವುದಾಗಿ ಭರವಸೆಯನ್ನು ಕೊಟ್ಟಿರುವುದಕ್ಕಾಗಿ ಅವರನ್ನು ನಾನು ಅಭಿನಂದಿಸುತ್ತೇನೆ. ಇದರಿಂದ ನಮಗೆ ಬಹಳ ಸಂತೋಷವಾಯಿತು. ನಿಜಸ್ಥಿತಿಯನ್ನು ಒಪ್ಪಿ ಪರಿಶೀಲಿಸುವ ಭರವಸೆಕೊಟ್ಟುದಕ್ಕೆ ಅವರನ್ನು ವಂದಿಸಬೇಕು. ನನ್ನ ಭಾಷಣದ ಮೊದಲಿನಲ್ಲಿ ಸೂಚಿಸಿದಹಾಗೆ ಯಾವಾಗಲೂ ಸರ್ಕಾರದವರು ಒಂದು ನಿರ್ಬಂಧಾಜ್ಞೆಯನ್ನು ಹೊರಡಿಸಬೇಕಾದ ಸಂದರ್ಭಬಂದಾಗ ಈ ಆಜ್ಞೆಗೆ ಅವಶ್ಯಕತೆಯಿದೆಯೇ, ಇಲ್ಲವೇ ಇದ್ದರೆ ಎಷ್ಟುಮಟ್ಟಿಗೆ ಇದೆ ಎಂಬುದನ್ನು ಕೂಲಂಕುಷವಾಗಿ ಪರ್ಯಾಲೋಚನೆಮಾಡಿ ತೀರ್ಮಾನಕ್ಕೆ ಬರುವುದು ಅತಿ ಮುಖ್ಯವೆಂದು ಒತ್ತಾಯದಿಂದ ಹೇಳುತ್ತೇನೆ. ಈ ನಿರ್ಬಂಧಾಜ್ಞೆಯ ಸಂಬಂಧವಾಗಿ ನಾನ್ ಒಪ್ಪಿಗೆ ಕಬ್ಬು ಎಷ್ಟೆಂದು ನಾನು ತಿಳಿಸಿದ್ದೇನೆ. ಸರ್ಕಾರದ ಪರವಾಗಿ ಉತ್ತರ ಕೊಟ್ಟಿದ್ದರಲ್ಲಿ ಬೇರೆ ಅಂಕಿ ಅಂಶಗಳು ಬಾರದಿದ್ದುದರಿಂದ ನಾನು ಹೇಳಿರುವುದೇ ಸರಿ. ಅದೇ ಖರಾರುವಾಕ್ ಎಂದು ಹೇಳಬೇಕಾಗಿದೆ. ಹಾಗೆ ಅವಶ್ಯಕತೆಯಿಲ್ಲದೇಯಿರುವ ಸಂದರ್ಭದಲ್ಲಿ ಏಕೆ ನಿರ್ಬಂದಾಜ್ಞೆಯನ್ನು ಮುಂದುವರಿಸಬೇಕೆಂದು ನನಗೆ ಎನಿಸುತ್ತದೆ.

ಮತ್ತೊಂದು ವಿಷಯ, ಈಗ ಬೆಲ್ಲವನ್ನು ತಯಾರು ಮಾಡತಕ್ಕ ಕಾರ್ಯವನ್ನು ನಿಷೇಧಮಾಡಿದ್ದೀರಿ. ಬಹಳ ಮಟ್ಟಿಗೆ ತಾವು ಕೊಡತಕ್ಕ ಪರ್ಮಿಟ್ ಸಕ್ಕರೆ ಕಂಪನಿಯವರ ಅಭಿಪ್ರಾಯವನ್ನವಲಂಬಿಸಿರುತ್ತದೆ. ಅವರ ಅಭಿಪ್ರಾಯದಮೇಲೆಯೇ ಡೈರೆಕ್ಟರು ಈ ರಹದಾರಿಗಳನ್ನು ಕೊಡುತ್ತಾರೆ. ಎಲ್ಲಿ ಒಪ್ಪಿಗೆ ಕಬ್ಬಿಗೆ ತೊಂದರೆ ಬರುತ್ತದೆಯೆಂದು ಅವರು ತಿಳಿಸುತ್ತಾರೋ ಅಂಥಾ ಸಂದರ್ಭದಲ್ಲಿ ಆಹಾರ ಶಾಖೆಯ ಡೈರೆಕ್ಟರು ಪರ್ಮಿಟ್ಟನ್ನು ಕೊಡುವುದಿಲ್ಲ. ಒಟ್ಟಿನಲ್ಲಿ ಮಂಡ್ಯ ಜಿಲ್ಲೆಯಲ್ಲಿ ಬೆಲ್ಲದ ತಯಾರಿಕೆಗೆ ಪ್ರತಿಬಂಧಕ ಬಂದ ಹಾಗಾಯಿತು. ಮಂಡ್ಯ ಜಿಲ್ಲೆಯಲ್ಲಿ ರೈತರು ಅಷ್ಟು ಕಬ್ಬನ್ನು ಬೆಳೆದು ಸಕ್ಕರೆ ಕಾರ್ಖಾನೆಗೆ ಕೊಟ್ಟು ಅವರಿಗೇ ಒಂದು ಅಚ್ಚು ಬೆಲ್ಲವೂ ಇಲ್ಲ. ಸಕ್ಕರೆಯೂ ಸಿಕ್ಕದೇ ಇರುವ ದುಸ್ಥಿತಿಗೆ ಅವರನ್ನು ಬಿಡುವುದು ನ್ಯಾಯವಲ್ಲ. ಹೀಗಾಗಿರುವುದನ್ನು ನಾನೂ ನೋಡಿದ್ದೇನೆ. ಡಿಪೋಗಳವರಿಗೂ ಅನುಭವವಿದೆ. (ಬಿ) ತರಗತಿಯ ರೇಷನ್ ಕಾರ್ಡು ಹೋಲ್ಡರಗಳಿಗೆ ಸಕ್ಕರ ಬೇಕಾದರೆ, ಅವರು ತಾಲ್ಲೂಕು ಅಮಲ್ದಾರರಲ್ಲಿ ಹೋಗಿ, ಡಾಕ್ಟರ್ ಸರ್ಟಿಫಿಕೇಟ್ ಕೊಟ್ಟರೆ ಅವರು ಕೊಡಬಹುದೆಂದು ಹೇಳುತ್ತಾರೆ. ಹೀಗಾದರೆ ರೈತನ ಗತಿ ಏನು? ಅವನಿಗೆ ಅವಶ್ಯಕವಾಗಿ ಬೇಕಾದಾಗ ಸಿಕ್ಕದಿದ್ದರೆ ಅವನ ಗತಿ ಏನು? ಕೋಲಾರ, ತುಮಕೂರು, ಶಿವಮೊಗ್ಗ ಮುಂತಾದ ಹೆಚ್ಚು ಬೆಲ್ಲ ತಯಾರು ಮಾಡುವ ಜಿಲ್ಲೆಗಳಿಂದ ನಮಗೆ ಬೆಲ್ಲಬರಬೇಕು. ಅಲ್ಲಿಂದ ಇಲ್ಲಿಗೆ ಬಂದು ಅದು ನಮಗೆ ದೊರೆಯಬೇಕಾದರೆ ಸಾಗಿಸುವ ಖರ್ಚು, ವರ್ತಕರ ನಫೆ ಎಲ್ಲಾ ನಮ್ಮ ಮೇಲೆ ಬೀಳುತ್ತದೆ. ತುಮಕೂರಿನಲ್ಲಿ ನಾಲ್ಕಾಣೆಯಾದರೆ ಮಂಡ್ಯ ಜಿಲ್ಲೆಯಲ್ಲಿ ಎಂಟಾಣೆ ಕೊಡಬೇಕು.

ನಮಗೆ ಸರಿಯಾದ ಬೆಲೆಗೆ ಬೆಲ್ಲವನ್ನೊದಗಿಸಿ, ಇಲ್ಲದಿದ್ದರೆ ಸಕ್ಕರೆಯನ್ನು ಕೊಡಿಸಿ. ಬೆಲ್ಲದ ತಯಾರಿಗೆ ಯಾವಾಗ ನಿರ್ಬಂಧಮಾಡಿದಿರೋ ಆಗ ಸರ್ಕಾರದ ಡಿಪೋಗಳಲ್ಲಿ ಜನರಿಗೆ ಬೆಲ್ಲ ಸಿಕ್ಕುವಂತೆ ಮಾಡಬೇಕು. ಹಿಂದೆ ಈ ವಿಷಯ ಚರ್ಚೆಗೆ ಬಂದಾಗ ಆಹಾರ ಇಲಾಖೆಯ ಡೈರೆಕ್ಟರು ಸುಮಾರು ಆರು ಸಾವಿರ ಮಣ ಬೆಲ್ಲ ದಾಸ್ತಾನಿದೆ. ಬೆಲ್ಲ ತಯಾರಾಗಿದೆಯೆಂದು ಉತ್ತರ ಹೇಳಿದರು. ಹಿಂದೆ ರೆವಿನ್ಯೂ ಮಂತ್ರಿಗಳ ಉತ್ತರ ಹೇಳಿದರು. ಹಿಂದೆ ರೆವಿನ್ಯೂ ಮಂತ್ರಿಗಳ ಮುಂದೆ ಚರ್ಚೆ ನಡೆದಾಗ ಮಣಕ್ಕೆ 2–12–0– ರೂಪಾಯಿ ಪ್ರಕಾರ 200 ಮಣ ಬೆಲ್ಲವನ್ನು ಮೂರು ದಿನಗಳಲ್ಲಿ ನಮ್ಮ ಜಿಲ್ಲೆಗೆ ಕಳುಹಿಸುವುದಾಗಿ ಹೇಳಿದರು. ಮೂರು ತಿಂಗಳಾದರೂ ಎರಡು ಮಣ ಬೆಲ್ಲ ಕೂಡ ನಮಗೆ ಸಿಕ್ಕಲಿಲ್ಲ. ಕಷ್ಟಪಟ್ಟು ಬೆಳೆದ ರೈತರು ಪಿತೃ ಪಕ್ಷದಲ್ಲಿ ವರ್ಷಕ್ಕೆ ಒಂದು ದಿವಸವಾದರೂ ತಿನ್ನಬೇಡವೆ? ದರವನ್ನು ಹೆಚ್ಚಿಸಿ ಎಂದು ಹೇಳಿದರೆ, ಆಹಾರ ಶಾಖೆಯಿಂದ ಆರ್ಡರ್ ಬರಬೇಕಾದರೆ ಯಾವ ಕಾಲಕ್ಕೋ ಮಂಡ್ಯ ಪ್ರಾಂತ್ಯದಲ್ಲಿ ಕಬ್ಬಿನ ಬೆಳವಣಿಗೆ ವರ್ಷ ವರ್ಷಕ್ಕೂ ಕಡಿಮೆಯಾಯಿತೆಂದು ಹೇಳಿದರು. ಇದಕ್ಕೆ ರೈತರು ಕಾರಣರೇ? ಸಕ್ಕರೆ ಕಂಪೆನಿಯವರು ಮತ್ತು ಸರ್ಕಾರದವರು ಇದಕ್ಕೆ ಮುಖ್ಯಕಾರಣರು. ಯಾವಾಗ ರೈತನು ಬೆಳೆಯುತ್ತಾನೋ ಆತನಿಗೆ ಸರಿಯಾದ ಪ್ರತಿ ಫಲವಿಲ್ಲದಿದ್ದರೆ ಅವನೇಕೆ ಮತ್ತೆ ಬೆಳೆಯುತ್ತಾನೆ? ಅಲ್ಲದೆ ತಾವೂ ಇರ್ವಿನ್ ನಾಲಾ ಪ್ರದೇಶದಲ್ಲಿ ಎಲ್ಲೂ ಇಲ್ಲದ ಒಂದು ವಿಚಿತ್ರ ಪದ್ಧತಿಯನ್ನು ತಂದಿದ್ದೀರಿ. ಆ ಬ್ಲಾಕ್ ಪದ್ಧತಿಯಂತೆ ಮೂರು ವರ್ಷದಲ್ಲಿ ಮೊದಲನೆಯ ವರ್ಷ ಕಬ್ಬು ಬೆಳೆದರೆ, ಮೂರನೆಯ ವರ್ಷ ಬತ್ತ ಬೆಳೆಯಬೇಕು, ಇನ್ನೊಂದು ವರ್ಷ ಜಮೀನು ಪಾಳು ಬಿಡಬೇಕು. ಇದರ ಜೊತೆಗೆ ಅಲ್ಲಿನ ಹವಾಗುಣ ಮತ್ತು ಮಲೇರಿಯಾ ಹಾವಳಿಯಿಂದ ಜನರ ಆರೋಗ್ಯವೆಲ್ಲಾ ಕೆಟ್ಟಿದೆ. ಇಷ್ಟು ಕಷ್ಟಪಟ್ಟು ರೈತನು ಬೆಳೆದರೂ ಆತನಿಗೆ ಸರಿಯಾದ ಪ್ರತಿಫಲವಿಲ್ಲದಿದ್ದರೆ ಅವನಿಗೆ ಬೆಳೆಯಲು ಆಸೆಯೇನಿರುತ್ತದೆ? ಆದ್ದರಿಂದ ತಾವು ರೈತನಿಗೆ ಸರಿಯಾದ ಬೆಲೆಯನ್ನು ಕೊಡುವುದಕ್ಕೆ ಅವಕಾಶ ಮಾಡಬೇಕೆಂದು ನನ್ನ ಅರಿಕೆ.

ಇನ್ನೊಂದು ವಿಷಯ, ಯಾವಾಗಲೂ ಸಕ್ಕರೆ ಕಂಪೆನಿಯವರು ತಮಗೆ ಬೀಳುವ ಖರ್ಚು, ಉತ್ಪತ್ತಿ ಯಾವುದನ್ನೂ ತಿಳಿಸುವುದಿಲ್ಲ. ರೈತನ ಬೆಳೆಗೆ ಬೀಳುವ ಖರ್ಚು ಒಂದು ಟನ್ ಕಬ್ಬಿಗೆ ಎಷ್ಟು ಧಾರಣೆ ಬೀಳುತ್ತದೆ ಎಂಬುದನ್ನೆಲ್ಲಾ ಲೆಕ್ಕಾಚಾರ ಮಾಡಿ ನಾವು ಕಂಪೆನಿಯವರಿಗೆ ಹೇಳಬೇಕು. ಅದರಂತೆಯೇ ನಾವು ಸಕ್ಕರೆ ಕಂಪೆನಿಯವರನ್ನು ಒಂದು ಟನ್ ಸಕ್ಕರೆಗೆ ಎಷ್ಟು ಅಸಲು ಬೆಲೆಯಾಗುತ್ತದೆ, ಎಷ್ಟು ಲಾಭ ಬರುತ್ತದೆ ಎಂಬುದನ್ನು ಯಾವುದನ್ನು ಕೇಳಿದರೂ ಅದರ ಗುಟ್ಟನ್ನು ಬಿಡುವುದಿಲ್ಲ. ಹೀಗೆ ಮಾಡಿದರೆ ರೈತರಿಗೆ ಹೇಗೆ ತೃಪ್ತಿಯುಂಟಾಗುತ್ತದೆ. ಕಂಪೆನಿಯ ವಿಷಯದಲ್ಲಿ ಅವರಿಗೇ ಸಹಾನುಭೂತಿಯಿರುತ್ತದೆ. ರೈತನ ಆದಾಯ ಖರ್ಚಿನ ಲೆಕ್ಕಗಳನ್ನೂ ಏಕೆ ಹೇಳಕೂಡದು? ಬೆಲೆ ನಿರ್ಧಾರದ ಸಮಿತಿಯಲ್ಲಿ ಈ ವಿಷಯವನ್ನು ಹೇಳಿದರೆ ಆಗತಕ್ಕ ಅನಾಹುತವಾದರೂ ಏನು? ಅಲ್ಲದೆ, ಆ ಸಮಿತಿಯಲ್ಲಿ ಕಬ್ಬನ್ನು ಬೆಳೆಯುವವರು ಯಾರೊಬ್ಬರೂ ಇಲ್ಲ. ದರವನ್ನು ಗೊತ್ತುಮಾಡುವುದಕ್ಕಾಗಲೀ, ಸಕ್ಕರೆ ಕಂಪೆನಿಯವರಿಗೆ ಬೀಳುವ ಸಕ್ಕರೆ ಖರೀದಿಯನ್ನಾಗಲೀ ತಿಳಿದುಕೊಳ್ಳುವ ಅವಕಾಶ ರೈತರಿಗೆ ಇರಕೂಡದೇ? ಹೀಗಿರುವಾಗ ತಾವು ಯಾವುದೋ ಒಂದು

ಧಾರಣೆ ಕೊಡುತ್ತೇವೆಂದು ಹೇ ಲೆ ನಿಗದಿ ಮಾಡಿದರೆ ಹೇಗೆ? ರೈತರಿಗೂ ಸಕ್ಕರೆ ಕಂಪೆನಿಯವರಿಗೂ ಸಹೋದರ ಭಾವನೆ ಬೆಳೆಯುವಂತೆ ಮಾಡಬೇಕಾದ್ದು ಮುಖ್ಯ. ಸಕ್ಕರೆ ಕಂಪೆನಿ ನಮ್ಮದು ಎಂಬ ಮಮತೆ ಅವರಿಗೆ ಬರಬೇಕು. ಅಂಥಾ ವಾತಾವರಣ ಕಲ್ಪಿಸುವಂತೆ ತಾವು ಮಾಡಿದರೇನೇ ಇರ್ವಿನ್ ನಾಲಾ ಪ್ರದೇಶದಲ್ಲಿ ಬ್ಲಾಕ್ ಸಿಸ್ಟಂ ಸರಿಯಾಗಿ ನಡೆಯುತ್ತದೆ. ಆದ್ದರಿಂದ ಈ ಎಲ್ಲಾ ವಿಚಾರಗಳನ್ನೂ ತಾವು ಮನಗಾಣಸಿಕೊಂಡರೆ ಅಲ್ಲಿರತಕ್ಕ ಅಷ್ಟು ಸ್ವಲ್ಪ ಪ್ರದೇಶದಲ್ಲಿ ಆ ಸುಮಾರು 180 ಎಕರೆಗಳಿಗಾಗಿ ಇಷ್ಟೊಂದು ನಿರ್ಬಂಧಾಜ್ಞೆಯನ್ನು ಸರ್ಕಾರದವರು ಏಕೆ ಮಾಡಿದರೋ ಗೊತ್ತಿಲ್ಲ. ಆದ್ದರಿಂದ ತಾವು ಉದಾರ ದೃಷ್ಟಿಯಿಂದ ಈ ಹುಕುಮನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ನಾನು ಒತ್ತಾಯದಿಂದ ಹೇಳುತ್ತೇನೆ.

**Mr. President** - Does the Honourable Member press this motion?

**Mr. S.C. Malliah** - Yes, Sir.

**Mr. President** - The question is "That the Chamber do now adjourn" The motion was adopted."



ನಮ್ಮದು ಹಳ್ಳಿಗಳ ನಾಡು, ಹಳ್ಳಿಗಳ ಉದ್ಧಾರವಾಗದ ಹೊರತು ಸಮಗ್ರ ದೇಶದ ಅಭಿವೃದ್ಧಿ ಸಾಧ್ಯವಾಗದು ಎಂಬ ಬಾಪೂಜಿಯವರ ಚಿಂತನೆಯೇನಿತ್ತು ಅದನ್ನು ಮಲ್ಲಯ್ಯನವರು ಸ್ವಯಂ ಕಂಡು ಅರಿತಿದ್ದರು. ಹಾಗಾಗಿ ಹಳ್ಳಿಗಳ ಮತ್ತು ಹಳ್ಳಿಗರ ಅಭಿವೃದ್ಧಿಗಾಗಿ ಅವರು ನಿರಂತರವಾಗಿ ತಮ್ಮ ವಿಚಾರಧಾರೆಯನ್ನು ಹರಿಸಿದ್ದಾರೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್

**1930-Oct. MRA**

**To Amend Tank Panchayat Res**

### General Principles of the Bill further to Amend the Tank Panchayet Regulation of 1911.

Further amendments to the Tank Panchayet Regulation of 1911 are necessary to make its provisions more effective for the purpose for which they are intended and also to put them in consonance with the Village Panchayet Regulation, II of 1926, and the Minor Tanks Restoration of 1923. The recommendations of the committee appointed to investigate and reception on this and several other irrigation matters have been received. The accompanying Bill has been prepared, to give effect to these recommendations. The salient feature of the Bill is amended Section 15(1) (a) which makes provision for the cultivation of a portion of the irrigable area under a tank with dry or semi-dry crops, in seasons when the supply in it is not sufficient. The other changes are merely

verbal and are intended to bring the provisions of the Regualation and the Minor Tanks Restoration Regulation as stated above.

**Mr. S.C. Mallaiah** agreed in the main with Mr. H.C. Dasappa. Although agreed that in one way the proposed amendment would he help the raiyats, yet he thought that as there would be no rains continuously every raiyat had the expectation that there would be sufficient rains later on to help his crops and with that expectation be would like to have his entire land cultivated with wet crops. It now the Government should say that only a portion of that land should be cultivated in any one year owing to the shortage of water in a tank at any period, it would certainly be a great hardship on the raiyats. He thought that in these circumstances the arrangement would not work in practice.

**THE FIRST MEMBER OF COUNCIL** said that the provision was already there, that water might be distributed according to the quantity available and that what was now proposed to be done was that power would be taken to determine to be done was that power would be taken to determine exactly what portions should be cultivated with wet, dry and semi-dry crops.

**Mr. S.C. Mallaiah** however did not agree to the imposition of the restriction and said that no raiyat would agree to it.

**The First Member of Council** explained, that if there was not sufficient water in a tank and also it the people wanted to distribute that water according to the crop proposed to be raised, there was no power to do so. Hence, the present amendment only proposed that instead of giving water only for wet cultivation, it might be given as so much for wet, so much for dry and so much for semi-dry cultivation.

**Mr. S.C. Mallaiah** feared that the proposed measure would interfere with the remission rules.

**The First Member of Council** said that it was not so and that there was provision for the grant of remission for the lands left uncultivated.

**Mr. Mir Mahomed** said that this provision would not work in the Malnad parts. He feared that conflict would crop up between the

*atchkatdars* themselves. Every *atchkatdar* would anticipate that there would be sufficient water and very few would like to grow *kushki* crops where wet crops were raised before. He therefore did not think that there should be any restriction.

**Mr. G. Chennappa** supported the Bill.

**Mr. N.G. Sanjeevaiah** did not agree that the provision of the Tank Panchayet Regulation should be incorporated in the Irrigation Bill. He supported the arguments brought forward by Mr. S.C. Mallaiah and opposed the present amendment.

**The Dewan** said that the Regulation of 1916 was amended by the Regulation of 1923. There was no change in the substance of the provision and the changes now proposed were merely of a verbal nature.

On this explanation, Mr. V. Venkatappa supported the measure.

The amendments were thereupon put to vote and passed.



ಗ್ರಾಮಾಭಿವೃದ್ಧಿ ಗ್ರಾಮಸ್ಥರ ಜವಾಬ್ದಾರಿ

ಈ ಅರಿಕೆ ವಿಚಾರದಲ್ಲಿ ಇದುವರೆಗೆ ನಡೆದ ಚರ್ಚೆ ಅರಿಕೆ ವಿಚಾರ ಬಿಟ್ಟು ಯೋಜನೆಯ ವಿಚಾರದಲ್ಲೇ ಹೆಚ್ಚಾಗಿ ನಡೆದಿದೆಯೆಂದು ಭಾವಿಸುತ್ತೇನೆ. ಮುಖ್ಯವಾಗಿ ಈ ಅರಿಕೆಯಲ್ಲಿ ಗ್ರಾಮ ನೈರ್ಮಲ್ಯ, ವಿದ್ಯಾಭ್ಯಾಸ, ವ್ಯವಸಾಯ, ಕೈಗಾರಿಕೆ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಮಾಡುವ ಜವಾಬ್ದಾರಿ ಪಂಚಾಯತಿಯವರಿಗೆ ವಹಿಸಬೇಕೆಂಬ ಅಂಶ ಅಡಗಿದೆಯೆಂದು ನಾನು ತಿಳಿದುಕೊಂಡಿದ್ದೇನೆ. ಆದರೆ ಇದುವರೆಗೆ ನಡೆದಿರುವ ಚರ್ಚೆ ಈಗಿರತಕ್ಕ ಯೋಜನೆಗೆ ಸಂಬಂಧಪಟ್ಟು ಗ್ರಾಮ ಸುಧಾರಕರಿಂದ ಎಷ್ಟು ಮಟ್ಟಿಗೆ ಕೆಲಸ ನಡೆದಿದೆ ಎಂಬುದನ್ನು ಅನ್ವಯಿಸಿದೆ. ಆದರೆ ಈಗಿರುವ ಯೋಜನೆ ಬಹಳ ಸಾರ್ವಜನಿಕವಾದುದು ಎಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ ಎಂದು ನನ್ನ ಭಾವನೆ. ಈ ಯೋಜನೆಯ ಹೆಚ್ಚು ಸಾರ್ವಜನಿಕವಾದುದೆಂದು ಜಾರಿಗೆ ತಂದಿರುವುದರಿಂದ ಫಲಕಾರಿಯಾಗಿ ಮಾಡಬೇಕಾದ ಕರ್ತವ್ಯ ಮುಖ್ಯವಾಗಿ ಅಧಿಕಾರ ವರ್ಗದವರಿಗೇ ಸೇರಿದೆ. ಎಲ್ಲರೂ ಅಧಿಕಾರಿಗಳು ಅವರ ಕರ್ತವ್ಯ ಲೋಪಮಾಡದೆ ಸರಿಯಾದ ಕಾರ್ಯವನ್ನು ಮಾಡಿದ್ದಾರೆಂದು ಹೇಳಿಲ್ಲ. ಈ ಕಾರ್ಯ ಸ್ವಲ್ಪಮಟ್ಟಿಗೆ ಕೆಲವು ಕಡೆ, ಇನ್ನು ಕೆಲವುಕಡೆ ಬಹಳಮಟ್ಟಿಗೆ ಸಫಲವಾಗಿದೆಯೆಂದು ಹೇಳಿದರೆ ತಪ್ಪಾಗಲಾರದು. ಈಗ ಮುಖ್ಯವಾಗಿ ಗ್ರಾಮಸುಧಾರಕ ಸಲಹೆ ಕೊಡುವ ಒಂದು ಏಜೆನ್ಸಿಯೇ ಹೊರತು ಅವರಿಗೆ ಯಾವ ವಿಧವಾದ ಅಧಿಕಾರವೂ ಇಲ್ಲ. ಗ್ರಾಮ ಸುಧಾರಕರು ಗ್ರಾಮದಲ್ಲಿ ಹೋಗಿ ಮಾಡಬೇಕಾದ ಅಭಿವೃದ್ಧಿ ವಿಷಯದಲ್ಲಿ ಸಲಹೆ ಕೊಡತಕ್ಕದ್ದು, ಗ್ರಾಮಸ್ಥರಿಗೆ ಸಹಾಯಕವಾಗಿ ಮಾರ್ಗದರ್ಶಿತ್ವ ಕೊಡುವುದು, ಇದಕ್ಕಿಂತ ಹೆಚ್ಚಾಗಿ ಕಾರ್ಯ ಮಾಡಲಿಲ್ಲ ಎಂದು ಹೇಳಿದರೆ ನಿಜವಾಗಿಯೂ ಅರ್ಥವಾಗುವುದಿಲ್ಲ. ಈಗ ಅನೇಕ ಕಡೆ ನಾನು ನೋಡಿರುವಂತೆ ಗ್ರಾಮಸುಧಾರಕರು ಬಹಳಮಟ್ಟಿಗೆ ಕಾರ್ಯ ಮಾಡಿದ್ದಾರೆ. ಇನ್ನೂ ಹೆಚ್ಚಿಗೆ ಆಗಬೇಕಾದ್ದು ಅನಾವಶ್ಯಕ. ಕೆಲವುಕಡೆ ಎಷ್ಟರಮಟ್ಟಿಗೆ ಮಾಡಬಹುದಾಗಿತ್ತೋ ಅಷ್ಟು ಆಗಲಿಲ್ಲವೆಂಬುದು ನಿಜ, ಅದಕ್ಕ ಕೊರತೆಂಯಾಗಿದೆ. ಗ್ರಾಮಾಭಿವೃದ್ಧಿ ಯೋಜನೆಯನ್ನು ಒಳಗೊಂಡಿರುವ ಯಾವ ಕಾರ್ಯವಾದರೂ ಕೂಢ

ಫಲಕಾರಿಯಾಗಬೇಕಾದರೆ ಸರ್ಕಾರದವರು ಒಂದಲ್ಲ ಒಂದು ದಿವಸ ಮನಸ್ಸು ಮಾಡಿದರೇನೇ ಆ ಕಾರ್ಯವಾಗುತ್ತದೆಯೇ ಹೊರತು ಅವರು ಮಾಡದೆ ಗ್ರಾಮಸುಧಾರಕರೇ ಆಗಲೀ ಗ್ರಾಮಸ್ಥರೇ ಆಗಲೀ ಯೋಜನೆಯೇ ಆಗಲೀ ಎಷ್ಟು ದಿವಸ ಪ್ರಯತ್ನಪಟ್ಟರೂ ಸಾರ್ಥಕವಾಗುವುದಿಲ್ಲ ಎಂದು ನನ್ನ ಅಭಿಪ್ರಾಯ.

ನನ್ನ ಮಿತ್ರರಾದ ಶ್ರೀ ಎಸ್. ರಾಮಪ್ಪನವರು ಒಂದು ಉದಾಹರಣೆ ಕೊಟ್ಟರು. ಮುಖ್ಯವಾಗಿ ತಾಲ್ಲೂಕು ಅಭಿವೃದ್ಧಿ ವಿಷಯದಲ್ಲಿ ಬೀಜದ ಹೋರಿಗಳನ್ನು ಸರಬರಾಯಿ ಮಾಡುವುದನ್ನು ಒಂದು ಮುಖ್ಯವಾದ ಧ್ಯೇಯವನ್ನಾಗಿಟ್ಟುಕೊಂಡಿದ್ದಾರೆ. ಅದೂ ಇದುವರೆಗೆ ನಡೆದಿಲ್ಲ. ಅದಕ್ಕೆ ಜವಾಬ್ದಾರರು ನಮ್ಮ ಸರ್ಕಾರದಲ್ಲಿರುವ ಪಶು ವೈದ್ಯ ಇಲಾಖೆಯವರೇ ಆಗಲಿ, ಗ್ರಾಮ ಸುಧಾರಕರೇ ಆಗಲಿ, ಅಥವಾ ಅದಕ್ಕೆ ಸಂಬಂಧಪಟ್ಟ ಯೋಜನೆಯಾಗಲೀ ಅಲ್ಲ. ಏನು ತೊಂದರೆ ಏತಕ್ಕೆ ಬೀಜದ ಹೋರಿಗಳನ್ನು ಒದಗಿಸಿಲ್ಲ ಎಂಬುದನ್ನು ಜವಾಬ್ದಾರರೇ ಹೇಳಬೇಕಾಗುತ್ತದೆ. ದಿನಬೆಳೆಗಾದರೆ ಗ್ರಾಮಾಭಿವೃದ್ಧಿಗೆ ಸಂಬಂಧಪಟ್ಟ ತಿಪ್ಪೆಗುಂಡಿ ಮುಚ್ಚುವುದು ಮತ್ತು ಗ್ರಾಮಠಾಣಕ್ಕೆ ಬೇಕಾದ ಪ್ರದೇಶವನ್ನು ಹೆಚ್ಚಿಸಿ ಉತ್ತಮವಾದ ಜಾಗದಲ್ಲಿ ಏರ್ಪಾಡುಮಾಡುವುದು ಇವೇ ಅವರ ಕೆಲಸಗಳು. ನಾನು ನೋಡಿದಹಾಗೆ ಅನೇಕ ಕಡೆ ಮನೆಕಟ್ಟಲು, 4–5 ವರ್ಷವಾದರೂ ಗ್ರಾಮಕ್ಕೆ ಬೇಕಾದ ಜಾಗ ಸಿಕ್ಕಲಿಲ್ಲ ಎಂದರೆ ನಿಜವಾಗಿಯೂ ಬಹಳ ವಿಷಾದಕರವಾದ ವಿಚಾರ. ಹೀಗಾದರೆ ಏನು ಅಭಿವೃದ್ಧಿಯನ್ನು ತಾನೇ ಸಾಗಿಸುವುದಕ್ಕೆ ಸಾಧ್ಯವಾದೀತು? ಈಗ ಸರ್ಕಾರದವರು ತಮಗೆ ಬೇಕಾದ ಅಕ್ವಿಜಿಷನ್ ಕ್ರಮವನ್ನು ಒಂದು ವಾರದೊಳಗಾಗಿ ಮುಗಿಸಿಬಿಡುತ್ತಾರೆ. ರೈಲ್ವೆ ಲೈನು ಹಾಕಬೇಕಾದರೂ ಒಂದು ವಾರದಲ್ಲಿ ಮುಗಿಸುತ್ತಾರೆ. ಆದರೆ ಒಂದು ಗ್ರಾಮದಲ್ಲಿ ಮನೆ ಕಟ್ಟಲು ತಾವೇನೋ ಹಣ ಕೊಟ್ಟರೂ ಮಾಡಬೇಕಾದ ಕಾರ್ಯ ಮಾಡಿಲ್ಲ. 4–5 ವರ್ಷವಾಗಲಿ ಎಂದು ಹೇಳಿದರೆ ನಿಜವಾಗಿ ಅಭಿವೃದ್ಧಿ ಮಾರ್ಗಕ್ಕೆ ನಾವು ಗುರಿಯೇ ಎಂಬುದನ್ನು ಶಂಕೆಯಿಂದ ನೋಡಬೇಕಾಗಿದೆ. ಇದಕ್ಕೆ ಸರ್ಕಾರದ ಅಧಿಕಾರಿಗಳು ಜವಾಬ್ದಾರರು. ಅದೇ ರೀತಿಯಲ್ಲಿ ಒಂದು ರಸ್ತೆಯಾಗಲೀ, ಒಂದು ಗ್ರಾಮಠಾಣ ವಿಷಯ ಆಗಲೀ, ಯಾವ ಅಭಿವೃದ್ಧಿ ಕಾರ್ಯತೆಗೆದುಕೊಂಡರೂ ಎಲ್ಲಕ್ಕೂ ಒಂದಲ್ಲ ಒಂದು ಅಧಿಕಾರ ವರ್ಗದವರ ಸಹಾಯ ಅತ್ಯಾವಶ್ಯಕವಾಗಿ ಬೇಕಾಗಿದೆ. ಅವರ ಸಹಾಯವಿಲ್ಲದೆ ಯಾವ ಪಂಚಾಯಿತಿಯೇ ಆಗಲೀ ಯಾವ ವಿಧವಾದ ಅಭಿವೃದ್ಧಿ ಕಾರ್ಯವನ್ನು ಮಾಡುವುದಕ್ಕಾಗುವುದಿಲ್ಲ. ಪಂಚಾಯಿತಿ ಒಂದೇ ಅಲ್ಲ, ಒಂದು ಡಿಸ್ಟ್ರಿಕ್ ಬೋರ್ಡ್ ಆದರೂ ಕೂಡ ಒಂದು ಕೆಲಸವನ್ನಾದರೂ ಅವರ ಸಹಾಯವಿಲ್ಲದೆ ಮುಂದುವರಿಸುತ್ತದೆಂದು ಹೇಳಲು ಸಾಧ್ಯವಿಲ್ಲ. ಈಗ ಏನಾಗಿದೆಯೆಂದರೆ, ಈ ಅರಿಕೆ ರೀತಿಯಲ್ಲಿ ಈಗ ಯಾವುದಾದರೂ ಸ್ಕೂಲು ಕೊಡಬೇಕಾದರೆ ಸರ್ಕಾರದವರೇ ಜವಾಬ್ದಾರಿ ವಹಿಸಿಕೊಂಡು ಕೊಡುತ್ತಾರೆ. ವೈದ್ಯ ಸಹಾಯ ಬೇಕಾದರೆ ಸರ್ಕಾರದವರೇ ಕೊಡುತ್ತಾರೆ. ಕೈಗಾರಿಕೆ ಸ್ಥಾಪನೆಯಾಗಬೇಕಾದರೆ ಸರ್ಕಾರದವರೇ ಮಾಡುತ್ತಾರೆ. ಈ ಅರಿಕೆ ರೀತಿಯಲ್ಲಿ ಜವಾಬ್ದಾರಿ ಪಂಚಾಯಿತಿಯವರಿಗೆ ಬರುತ್ತದೆಯೇ ಎಂಬುದಕ್ಕೆ ಒಂದು ಉದಾಹರಣೆ ಹೇಳುತ್ತೇನೆ. ಪ್ರಾಥಮಿಕ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ಸ್ಥಳೀಯ ಸಂಸ್ಥೆಗಳಿಗೆ ಸರ್ಕಾರದವರು ಕೆಲವು ವರ್ಷದಿಂದ

ವಹಿಸಿದಾಗ 10 ವರ್ಷದ ಅವಧಿಯಲ್ಲಿ ಎಷ್ಟುಮಟ್ಟಿಗೆ ಮುಂದುವರಿಯಿತು, ಸಾರ್ಥಕವಾಯಿತು ಎಂಬುದನ್ನು ನಿಜವಾಗಿ ನೋಡಿದರೆ ನಾವು ಈ ದಿವಸ ಯಾವ ಗ್ರಾಮಪಂಚಾಯಿತಿಯೇ ಆಗಲೀ ಸ್ಥಳೀಯ ಸಂಸ್ಥೆಯೇ ಆಗಲಿ, ಅದರ ಜವಾಬ್ದಾರಿಯನ್ನು ತೃಪ್ತಿಕರವಾಗಿ ನೆರವೇರಿಸುತ್ತಿದೆ ಎಂದು ಖಂಡಿತವಾಗಿ ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಅದಕ್ಕೆ ತಗಲುವ ವೆಚ್ಚ ಮತ್ತು ಬೇಕಾಗಿರುವ ಮೊಬಲಗು ವಿಶೇಷ ಗ್ರಾಮಪಂಚಾಯಿತಿ ಮುಖ್ಯ ಕರ್ತವ್ಯ. ಇನ್ನೂ ಅನೇಕ ವಿಧವಾಗಿ ಇರುವಾಗ ಆ ಕರ್ತವ್ಯಮಾಡಿ ಪೂರೈಸುವುದಕ್ಕೇ ಸಾಕಾದಷ್ಟು ಮೊಬಲಗೇ ಇಲ್ಲದೆ ಇರುವಾಗ ಹೊಸದಾಗಿ ಸರ್ಕಾರದವರು ಮಾಡಬೇಕಾದ ಕೆಲಸವನ್ನೂ ಪಂಚಾಯಿತಿಯವರಿಗೇ ವಹಿಸಿದರೆ ನಿಜವಾಗಿಯೂ ನೂರಲ್ಲ ಸಾವಿರವರ್ಷವಾದರೂ ಮುಂದುವರಿಯುತ್ತದೆ, ಕಾರ್ಯನೆರವೇರುತ್ತದೆ ಎಂದು ಹೇಳುವುದಕ್ಕಾಗುವುದಿಲ್ಲ. ಅದೇ ರೀತಿ ಎಲ್ಲಾ ಮುಖ್ಯ ಕೆಲಸದ ಈ ಜವಾಬ್ದಾರಿಯನ್ನೆಲ್ಲಾ ಈಗ ಸರ್ಕಾರದವರು ನಿರ್ಧರಿಸಿರುವ ರೀತಿಯಲ್ಲಿ ಮುಂದೆ ಅವರಿಗೆ ಹೆಚ್ಚಾಗಿ ವಹಿಸಬೇಕು. ಒಂದು ಉದಾಹರಣೆ ಅಕ್ವಿಜಿನ್ ವಿಷಯದಲ್ಲಿ ಸರ್ಕಾರದವರಿಗೆ ಇರುವುದು ಏನು ತೊಂದರೆಯೋ ಗೊತ್ತಾಗುವುದಿಲ್ಲ. ನಾವು ವರ್ಷಗಟ್ಟಲೆ ಮೇಲೆಕೆಳಗೆ ಓಡಾಡಬೇಕು. ಇತ್ಯರ್ಥವಾಗಿ ಬರೆದ ಸ್ಥಳ ಬದಲಾಯಿಸುವುದು ಹೇಗೆ ಎಂದು ಎನಿಸುತ್ತದೆ. ಯಾವ ಗ್ರಾಮವೇ ತೆಗೆದುಕೊಂಡರೂ ಮುಖ್ಯವಾಗಿ ಬೇಕಾಗಿರುವುದು ಗ್ರಾಮಬಡಾವಣೆ. ಆಮೇಲೆ ಬಾವಿ, ರಸ್ತೆ, ವೈದ್ಯ ಸಹಾಯ ಇದೆಲ್ಲಾ ಬರುತ್ತವೆ. ಮೊದಮೊದಲು ಸರ್ಕಾರದವರಿಗೆ ಖರ್ಚಾಗುವುದಿಲ್ಲ. ಆಮೇಲೆ ಯಾವ ಯಾವ ಕೆಲಸಮಾಡಿಸಬೇಕು, ಅದು ಎಷ್ಟು ವರ್ಷಕಾಲ ಹಿಡಿಯುತ್ತದೆ ಎಂಬುದನ್ನೆಲ್ಲಾ ಪರಿಶೀಲಿಸಿ ಅನಂತರ ಕಾರ್ಯಕ್ರಮ ಕೈಗೊಳ್ಳಬೇಕು. ಸರ್ಕಾರದವರು ನಿಜವಾಗಿಯೂ ಮನಸ್ಸು ಮಾಡಿದರೆ ನಾನು ತಮಗೆ ಮೊದಲೇ ತಿಳಿಸಿದ ರೀತಿ, ತಮಗೆ ಅತಿ ಜರೂರಾದ ಕೆಲಸವನ್ನು ಮಾಡಲು ಬಾಕಿ ಕೆಲಸಬಿಟ್ಟು ತಕ್ಷಣ ತೆಗೆದುಕೊಳ್ಳುವಂತೆ ಗ್ರಾಮಬಡಾವಣೆ ಕೆಲಸವನ್ನೂ ಜಾಗ್ರತೆಯಾಗಿ ಪೂರೈಸುವಂತೆ ಮಾಡದಿದ್ದರೆ ನಿಜವಾಗಿ ಗ್ರಾಮಾಭಿವೃದ್ಧಿ ಯೋಜನೆಯು ಪೂರ್ತಿಯಾಗದೇ ನಿಂತುಹೋಗುತ್ತದೆ. ಪ್ರತಿ ಮೀಟಿಂಗು ಅಥವಾ ವರ್ಷದ ಲೆಕ್ಕದಲ್ಲಿ ಬರೇ ಲೆಕ್ಕವನ್ನು ಮಾತ್ರ ನೋಡಬಹುದು. ನಿಜವಾಗಿಯೂ ಅದು ಇತ್ಯರ್ಥವಾಗಿ ಫಲಕಾರಿಯಾಗಿ ಜನಗಳಿಗೆ ಸಹಾಯವಾಗುತ್ತದೆಂದು ಹೇಳುವುದಕ್ಕಾಗುವುದಿಲ್ಲ. ಆದ್ದರಿಂದ ಈಗ ಶ್ರೀ ಎಲ್. ವೇಮಾರೆಡ್ಡಿಯವರು ಸೂಚಿಸಿರುವ ರೀತಿಯಲ್ಲಿ ಈ ಜವಾಬ್ದಾರಿಯನ್ನು ಗ್ರಾಮಪಂಚಾಯಿತಿಯವರಿಗೆ ಸುತ್ರಾಂ ವಹಿಸಕೂಡದು ಎಂದು ಕಂಠೋಕ್ತವಾಗಿ ಹೇಳುತ್ತೇನೆ. ಆ ರೀತಿಯಾಗಿ ವಹಿಸಿದರೆ ಮುಂದುವರಿಯುವುದು ಬಿಟ್ಟು ಇದ್ದಂತೆಯೇ ಇರುವುದೂ ಅಲ್ಲದೆ ಹಿಂದಕ್ಕೆ ಹೋಗಲು ಅವಕಾಶವಾಗುತ್ತದೆ. ಆದುದರಿಂದ ಈ ಜವಾಬ್ದಾರಿಯನ್ನು ಸರ್ಕಾರದವರೇ ಹೊತ್ತುಕೊಂಡು ಇನ್ನೂ ಹೆಚ್ಚು ಶ್ರದ್ಧೆಯಿಂದ ಮತ್ತು ತೀವ್ರಾಸಕ್ತಿಯಿಂದ ಈ ಕಾರ್ಯಮಾಡಿ ಗ್ರಾಮದ ಅಭಿವೃದ್ಧಿಯನ್ನು ಮುಂದುವರಿಸಬೇಕಾಗಿ ಪ್ರಾರ್ಥನೆ.



## Administration and Working of Village Panchayats *

**Mr. S.C. Malliah** (Speaking in Kannada), Sir, in supporting the cut motion, I wish to say a few words. I am of opinion that the administration of these bodies should be in the hands of the revenue authorities. As the mover has pointed out, many village panchayats do not at all collect their taxes property and even the amounts collected by a few panchayats are not utilised for the purposes for which they are intended. This is due to the fact that the authorities responsible are not exercising proper supervision over the expenditure. During Jamabandi, the revenue officers look only to Government demands and pay no attention what soever to village panchayat dues. So long as these officers are camping in the villages, why should they not take some interest in regard to village panchayat dues also ? By their evincing some interest, the collections will improve and the amounts collected will also be spent on useful items only.

Secondly, there have been instances where the funds of a village panchayat have been spent outside its jurisdiction, which is opposed to the Village Panchayat Regulation. For example, for a sericultural Conference at Bangalore, the village panchayats in Mysore District were asked to contribute. For a Town Hall at a taluk headquarter, all the village panchayats of that taluk were made to contribute. Why should the panchayats contribute for such items of expenditure when they have no money for discharging their own obligatory duties ? These are but a few instances to prove that the revenue authorities are not taking inteset in the matter of the proper utilisation of village panchayat funds. I have said in my budget speech that the revenue officers should prepare the D.C.B. statements for these local bodies and must chalk out programmes of work every year. Such a request is being made from time to time, but so far no action has been taken by the Government.

* ನ್ಯಾಯ ವಿಧಾಯಕ ಸಭೆಯಲ್ಲಿ

Thirdly, as **Mr. Chengalaraya Reddy** has rightly pointed out, the present method of nominations of chairmen to village panchayats is very unsatisfactory. Either the village patel or shanbhog is automatically nominated as chairman. This has been the cause of poor collections and there have been many cases of misapplication of money. Wherever they are considered to be specially fit, let them by all means be appointed. But, generally speaking, that is not at all a satisfactory method. If there is any educated man other than the shanbhog or the patel, he must be preferred for that place. In a matter of this kind the Amildars should use their discretion and not entirely depend on the recommendations made by Revenue inspectors.

Another thing I wish to mention is this ; I agree with the view expressed by Mr. Chengalaraya Reddy that audit of panchayat accounts is very necessary. What is happening at present is that the audit of village panchayat accounts is done at the pleasure of the revenue officers. If they like, they do it ; otherwise they do not. Instead of that, it must be made a rule that every year the accounts of at least a number of panchayats must be audited. Mere looking into the balances would not be of much use in detecting misapplications of funds. If regular audits are instituted, not only will frauds be reduced, but also the collections in the panchayats will improve to a very great extent.

It was said by the mover that the arrears of village panchayat funds to be collected come to the time of Rs. 30 lakhs. If the revenue officers had taken some interest in the collection of these arrears, such a heavy amount would not have been left uncollected. The revenue officers must take the initiative in the matter and see that funds are collected and spent on useful items only. By doing so, a number of panchayats can be improved year after year.

Another most important suggestion which I would like to make is this, The revenue officers must do some surprise inspections. Unless they make surprise inspections they will not be in a position to know actual facts. If they make their programme in advance, the subordinates will see that all things are kept in order. That will not help matters. If surprise inspections are held in a few villages, all the panchayats are sure to improve within short time. The Government might say that the chairman and the members of every panchayat should see to the proper utilisation of the funds and the improvement of the areas. But much headway cannot be done in the direction owing to illiteracy in most of the villages and the existence of parties. It is very necessary that Amildars should take full interest and necessary initiative on behalf of the panchayats.

**Mr. H.C. Dasappa.-** Sir, I think it is nearly seven years since the village panchayats were reorganised under the Village Panchayat REgulation, and it is time that we took stock of the progress we have made and tried to ascertain how far this Regulation has fulfilled the original expectations which, of course, ran very high at the time. I may point out that in regard to the revenues of these panchayats, there is nothing which is satisfactory and a great deal of effort must be made to put the D.C.B. position in order. As regards expenditure, I am afraid there is no comprehensive policy at all. My Friend Mr. Reddy was saying that it was the revenue authorities who were laying down programmes and policies. I doubt very much whether there is any programme or policy in the working of these panchayats. We have now more than Rs. 30 lakhs to the credit of village panchayat funds a very decent sum quite apart from the balance that are still outstanding. If the Government were to make up its mind to chalk out a regular

comprehensive programme of utilising this large amout, they would have done something towards the amelioration of the conditions in the rural areas.

Much has been said with regard to the utilisation of the village panchayat funds. My friend Mr. Malliah was referring to the construction of a town hall in a taluk headquarter from out of the village panchayet funds. There are very many other things for which the village panchayat funds are spent.

**Mr. President.-** Where was that ? Mandya ?

**Mr. S.C. Mallaiah :** Yes. Subscriptions were collected from Malavalli, Maddur and all the village panahayats. Also for the Sericultural Conference in Bangalaore District, contributions have been collected from village panchayat's in Maddur.



## ಹಿಂದುಳಿದವರ ಪರ

ಹಿಂದುಳಿದವರ ಹಿತ ಕಾಪಾಡುವ ದೃಷ್ಟಿಯಿಂದ ನಡೆಯುತ್ತಿದ್ದ ಹೋರಾಟದ ಹಿನ್ನೆಲೆಯಲ್ಲಿ ರಚಿಸಲಾಗಿದ್ದ ಲೆಸ್ಲಿ ಮಿಲ್ಲರ್ ಸಮಿತಿಯ ವರದಿಯ ಶಿಫಾರಸ್ಸಿನ ಮೇಲೆ ಸ್ವಲ್ಪ ಮಟ್ಟಿನ ಸುಧಾರಣೆ ಸಾಧ್ಯವಾಯಿತಾದರೂ, ಬ್ರಾಹ್ಮಣೇತರರಿಗೆ ಉದ್ಯೋಗಾವಕಾಶಗಳಲ್ಲಿ ಮಿತಿ ಹೇರಲಾಗಿತ್ತು. ಈ ಸಂದರ್ಭದಲ್ಲೇ ಹಿಂದುಳಿದವರ ಪರವಾಗಿ ಹೋರಾಟದ ಕಣಕ್ಕಿಳಿದ ಮಲ್ಲಯ್ಯನವರು ಸದನದೊಳಗೂ ಹೊರಗೂ ಮುಂಚೂಣಿ ಹಿಡಿದರು. ಆದರವರ ಗುರಿ ಬರೀ ಉದ್ಯೋಗ ಕ್ಷೇತ್ರಕ್ಕೆ ಮಾತ್ರ ಮೀಸಲಾಗಿದೆ, ಶಿಕ್ಷಣ, ಕೈಗಾರಿಕೆ ಮತ್ತಿತರ ಕ್ಷೇತ್ರಗಳಿಗೂ ಹರಡಿಕೊಂಡಿದ್ದು ಗಮನಾರ್ಹ. ಸದನಗಳಲ್ಲಿ ಅವರು ಮಾಡಿದ ಭಾಷಣಗಳಲ್ಲಿ ಕೆಲವನ್ನು ಇಲ್ಲಿ ನೀಡಲಾಗಿದೆ.

ಮದರಾಸಿನ ಕಾನೂನು ಮೈಸೂರಿಗೇಕೆ ಬೇಡ?

**June 1931 General resolution No.3,**

**Mr. S.C. Malliah moved the following resolution:-**

"This Assembly recommends to the Government of His Highness the Maharaja the desirability of adopting suitable measures in the matter of securing adequate representation of the backward classes in

the higher ranks as the progress achieved in this behalf during the last twelve years has not been satisfactory."

He pointed out that the question raised in the resolution was fully discussed in connection with the previous resolution. The main reason why the proportion of representation prescribed in the order on the Miller Committee Report was not attained was due to the fact that the order was not attained was due to the fact that the order was not made applicable to appointments carrying a salary of Rs. 100 and above. It was absolutely necessary that the representation of the backward classes in the higher ranks of service should be improved. This did not mean that the existing Brahmin officers should be sent home immediately, but it did mean that if the administration should be run more efficiently, the representatives of all communities should find a place in the higher ranks also. Seeing that 98 per cent of the population belong to the backward communities, it stands to reason that the major portion of the appointments should go to them in the first instance. The report of the Central Recruitment Board showed that the proportion of the ministerial appointments had not risen appreciably even though the order came into force 10 years ago, and he was certain that unless the representatives of the non-Brahmin communities were given a direct hand in the administration, the people of those communities would not be satisfied; and this dissatisfaction was being shown to Government at every session of the Assembly. But Government did not take any action to meet their wishes.

In the neighbouring presidency of Madras, definite rules had been framed in the matter of recruitment. Why should not these rules be introduced in Mysore also? Government was being approached

repeatedly to definite the principles to appointments to higher ranks, including those carrying Rs. 100 and more. But nothing was done so far. He wanted to know what difficulty there was in the way of their appointing a Staff Selection Board or a Public Service Commission. He suggested the appointment of a committee to work out details for constituting such a body. If, however, Government were prepared to accept the resolution straightway, there would be no need for the proposed committee also.



"Mr. S.C. Malliah pointed out that the Backward communities were not allowed the full benefit of the allotment of Rs.1 lakh which was known as the Backward Class Scholarship Fund, because Rs.25,000 out of this amount was ear-marked for Depressed Class Scholarships and about Rs. 10,000 for the University.

ಹಿಂದುಳಿದ ವಿದ್ಯಾರ್ಥಿಗಳಿಗೆ ಹೆಚ್ಚಿನ ನೆರವು ಕೊಡಿ

"He emphasised the fact that the encouragement shown to pupils must be continuous at least up to S.S.L.C. since education which is broken at a lower stage would not do any good either to the pupils or to the community. He said that the number of pupils in the S.S.L.C. course was barely 3,000 out of a population of 6 millions of Backward classes, and that would show the backwardness of the people in education. He said that the very fact that a resoulution had been moved in this House for the appointment of an Economic Inquiry Committee was proof enough to show that the vast majority of the people were subject to extreme poverty and were thus unable to pay for the education of their children. He, therefore appealed to Government to enhance the scholarship grant suitably to spread education among the masses."

೦

# ಮಸೂದಾ ವಿಚಾರಗಳು

ಸ್ವಾತಂತ್ರ್ಯ ಪೂರ್ವ ಸಂದರ್ಭದಲ್ಲಿ ಅದರಲ್ಲೂ ಪ್ರಜಾಪ್ರಭುತ್ವದ ಹಾದಿಯಲ್ಲಿ ನಡೆಯುತ್ತಿದ್ದ ನಮ್ಮ ನಾಡಿನಲ್ಲಿ ಯಾವೊಂದು ಕ್ಷೇತ್ರವೂ ಕ್ರಮಬದ್ಧವಾದ, ವ್ಯವಸ್ಥಿತವಾದ ಸ್ವರೂಪ ಪಡೆದಿರಲಿಲ್ಲ. ಏಕೆಂದರೆ ದೀರ್ಘಕಾಲದ ಪರಕೀಯ ಆಳ್ವಿಕೆ, ಅದಕ್ಕೂ ಮುನ್ನ ರಾಜಾಡಳಿತ ಹೀಗೆ ಸಾಮಾನ್ಯ ಜನರಲ್ಲಿ ವಿಚಾರಶೀಲತೆ ಎನ್ನೂವುದು ಬೆಳೆಯುವುದಕ್ಕೇ ಅವಕಾಶವಿರಲಿಲ್ಲ. ಯಾವಾಗ ಪ್ರಜಾಪ್ರತಿನಿಧಿ ಸಭೆ 1881ರಲ್ಲಿ ಆರಂಭವಾಯಿತೋ ಆವಾಗಿನಿಂದ ಪ್ರಜೆಗಳ ಪ್ರತಿನಿಧಿಗಳು ಧ್ವನಿಎತ್ತಿ ಮಾತಾಡುವ ಅವಕಾಶ ಸಿಕ್ಕಿತು. ತಮ್ಮವರಿಗೆಲ್ಲಾ ಬೇಕೆಂಬುದನ್ನು ಅರಿತ ಪ್ರಜಾಪ್ರತಿನಿಧಿಗಳ ದೊರೆಗಳ ಮುಂದೆ ಅದನ್ನೆಲ್ಲ ಬಿಚ್ಚಿ ಹೇಳಿಕೊಳ್ಳುವ ಸಂದರ್ಭ ಸೃಷ್ಟಿಯಾಯಿತು. ಹಾಗಾಗಿ ಅನೇಕ ವಿಚಾರಗಳ ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚೆಗೆ ಬರತೊಡಗಿದವು. ಅಂಥ ಅವಕಾಶಗಳ ಮೊದಮೊದಲ ಸಂದರ್ಭ ಅದಾಗಿದ್ದುದರಿಂದ ಅಲ್ಲಿ ಬೆಂಕಿಕಡ್ಡಿಯಿಂದ ಹಿಡಿದು ಶಾಸನ ರಚನೆಯವರೆಗೆ ವೈವಿಧ್ಯಮಯ ವಿಚಾರಗಳು ಅಲ್ಲಿ ವಿನಿಮಯವಾಗುತ್ತಿದ್ದವು. ಅವೆಲ್ಲ ಆ ಕಾಲದ ಮಟ್ಟಿಗೆ ಮಹತ್ವದ ವಿಚಾರಗಳೇ ಆಗಿದ್ದವು. ಜೊತೆಗೆ ಎಲ್ಲವೂ ವ್ಯವಸ್ಥಿತವಾಗಿ ರೂಪುಗೊಳ್ಳುತ್ತಿದ್ದ ಆ ಕಾಲದಲ್ಲಿ ಸರಿಪಡಿಸಬೇಕಾದ್ದೂ ಕ್ರಮಬದ್ಧಗೊಳಿಸಬೇಕಾದ್ದೂ ಬಹಳಷ್ಟಿದ್ದರು. ಹಾಗಾಗಿ ಅಂದಿನ ಪ್ರಜಾಪ್ರತಿನಿಧಿಗಳು ತಮ್ಮ ದೃಷ್ಟಿಗೆ ಸಿಕ್ಕಿದ ತಮ್ಮವರ ಕಷ್ಟಕ್ಕೆ ದಕ್ಕಿದ, ನಾಡಿನ ಹಿತದೃಷ್ಟಿಗೆ ಬೇಕಾದ ಅನೇಕ ವಿಷಯಗಳ ಸದನಗಳಲ್ಲಿ ಮಂಡನೆಯಾಗಿವೆ. ಮಲ್ಲಯ್ಯನವರೂ ಅಂಥ ಅವಕಾಶವನ್ನು ಸದುಪಯೋಗ ತರಿಸಿಕೊಂಡು ಮಂಡಿಸಿರುವ ಮತ್ತು ಅವು ಕಳೆದ ಮಸೂದಾ ವಿಷಯ ವೈವಿಧ್ಯ ಸ್ವರೂಪಗಳಿಗೆ ಕೆಲ ಉದಾಹರಣೆಗಳು ಇಲ್ಲಿವೆ.

**1942ರ ಅಕ್ಟೋಬರ್‌ನಲ್ಲಿ ಮಲ್ಲಯ್ಯನವರು ಮೈಸೂರು ಸಂಸ್ಥಾನದ ಮೈನರ್ ಮುನಿಸಿಪಾಲಿಟಿಗಳು (ತಿದ್ದುಪಡಿ) ಮಸೂದಾ ಕಾನೂನಿನ ಪರ್ಯಾಲೋಚನೆ ಮಾಡುತ್ತಾ ಮಾಡಿದ ಭಾಷಣದ ಪಠ್ಯಭಾಗ ಇದು;**

## ಮೈನರ್ ಮುನಿಸಿಪಾಲಿಟಿ ಮಸೂದೆಗೆ ಷರತ್ತಿನ ಬೆಂಬಲ

ಸ್ವಾಮಿ, ಬೆಂಗಳೂರು, ಮೈಸೂರು ನಗರಗಳಲ್ಲಿ ಮುನಿಸಿಪಲ್ ಸರಹದ್ದಿನೊಳಗೆ ಆಸ್ತಿಗಳನ್ನು ಕ್ರಯ, ದಾನ, ಆಧಾರ ಅಥವಾ ಪರಭಾರೆ ಮಾಡಬೇಕಾದರೆ ಶೇಕಡ ಒಂದು ರೂಪಾಯಿನಂತೆ ತೆರಿಗೆಯನ್ನು ವಿಧಿಸಬೇಕೆಂದು ಈ ಮಸೂದೆಯನ್ನು ತಂದಿರುತ್ತೀರಿ. ಈ ರೀತಿಯ ಹೆಚ್ಚಿಗೆ ತೆರಿಗೆಯನ್ನು ಹಾಕಲು ಅನುಮತಿಬೇಕೆಂದು ಬೆಂಗಳೂರು ನಗರ ಸಭೆಯವರಿಂದ ಬಂದ ಮೇಲೆ ತಾವು ಈ ಮಸೂದೆಯನ್ನು ತಂದಿರುತ್ತೀರೆಂಬುದನ್ನು ವ್ಯಕ್ತಪಡಿಸುತ್ತೀರಿ. ಈಗಿನ ಯುದ್ಧದ ದೆಸೆಯಿಂದ ಆಹಾರ ಪದಾರ್ಥಗಳ ಬೆಲೆ ಜಾಸ್ತಿಯಾಗಿರುವುದರಿಂದ ಈ ತೆರಿಗೆಯನ್ನು ವಿಧಿಸುವುದರಿಂದ ಮಧ್ಯಮ ವರ್ಗದ ಜನರಿಗೆ ತೊಂದರೆಯಾಗುತ್ತದೆಂದು ನನ್ನ ಮಿತ್ರರಾದ ಶ್ರೀಮಾನ್ ಎ.ಎಸ್. ರಾಮರಾಯರು ತಿಳಿಸಿದರು. ಆದರೆ ನಾನು ಈ ಸಂದರ್ಭದಲ್ಲಿ ತಿಳಿಸುವುದೇನೆಂದರೆ, ಪೌರಸಭೆಯ ಸದಸ್ಯರು ಮುಖ್ಯವಾಗಿ ತೆರಿಗೆ ಕೊಡುವವರ ಪ್ರತಿನಿಧಿಗಳು, ಅವರು ಈ ತೆರಿಗೆಯನ್ನು ವಿಧಿಸುವುದು ಅವಶ್ಯಕವೆಂದು ಅಭಿಪ್ರಾಯಪಟ್ಟಿರುವ ವಿಷಯವನ್ನು ಪರ್ಯಾಲೋಚಿಸುವುದು ಯುಕ್ತವಾಗಿದೆ. ಪಟ್ಟಣಿಗರ ಹಿತದೃಷ್ಟಿಯಿಂದ ಮಾತ್ರವೇ ನಗರಸಭೆಯವರು ಈ ಸೂಚನೆಯನ್ನು ಕೊಟ್ಟಿರುತ್ತಾರೆಂದು ನಾವು ನಂಬಬಹುದಾಗಿದೆ. ಹೀಗೆ ನಗರದ ಪ್ರಜೆಗಳ ಪ್ರತಿನಿಧಿಗಳು ನಗರಾಭಿವೃದ್ಧಿಯ ಮೇಲಣ ಅಭಿಮಾನದಿಂದ ಏಕಾಭಿಪ್ರಾಯದಿಂದ ಸೂಚಿಸಿರುವ ಸಲಹೆಯನ್ನೇ ಸರ್ಕಾರದವರು ನಮ್ಮ ಮುಂದಿಟ್ಟಿರುವಾಗ ಈ ಮಸೂದೆಯನ್ನು ಒಪ್ಪುವುದು ಸೂಕ್ತವೆಂದು ತೋರುತ್ತದೆ. ಆದರೆ ಶ್ರೀಮಾನ್ ಎ.ಎಸ್. ರಾಮರಾಯರು ಹೇಳಿದಹಾಗೆ ಬಡವರಿಗೆ ಈ

ವಿಚಾರದಲ್ಲಿ ಸ್ವಲ್ಪ ವಿನಾಯಿತಿ ಕೊಡುವುದು ಯುಕ್ತವಾಗಿದೆ. ಬಡವರು ಕೇವಲ ಕಷ್ಟ ಕಾಲದಲ್ಲಿ ಆಧಾರ, ಭೋಗ್ಯ ಮುಂತಾದುವುಗಳ ಮೂಲಕ ಸ್ವತ್ತನ್ನು ಪರಭಾರೆ ಮಾಡುತ್ತಾರೆ. ಹೀಗೆ ಪರಭಾರೆ ಮಾಡುವಾಗ ಅವರಿಗೆ ವಿನಾಯಿತಿಯನ್ನು ಕೊಡುವುದು ಅಗತ್ಯವಾಗಿದೆ. ಆದರೆ ಇದರಿಂದ ಬರೀ ಲಾಭ ಪಡೆಯುವ ದೃಷ್ಟಿಯಿಂದ ನೋಡುವುದು ಸರಿಯಲ್ಲ. 100 ರೂಪಾಯಿನ ಸ್ವತ್ತನ್ನು 2000 ರೂಪಾಯಿಗೆ ಮಾರಿ ಲಾಭ ಪಡೆಯುವ ಸಂದರ್ಭದಲ್ಲಿ ಈ ತೆರಿಗೆಯನ್ನು ವಿಧಿಸುವುದು ಒಳ್ಳೆಯದು. ಆದರೆ ಒಬ್ಬ ಮನುಷ್ಯನು ತನ್ನ ಅಗತ್ಯಕ್ಕನುಸಾರವಾಗಿ 50,60 ರೂಪಾಯಿಗಳನ್ನು ಸಾಲ ತೆಗೆದುಕೊಳ್ಳುವ ಸಂದರ್ಭದಲ್ಲಿ ನೀವು ಈ ತೆರಿಗೆಯನ್ನು ವಿಧಿಸಿದರೆ ಅವರಿಗಿರುವ ಕಷ್ಟದ ಜತೆಗೆ ಇನ್ನೂ ಕಷ್ಟವನ್ನು ಕೊಟ್ಟಂತಾಗುತ್ತದೆ. ಇಂಥಾ ಸಂದರ್ಭದಲ್ಲಿ ವಿನಾಯಿತಿ ಕೊಡುವುದು ಖಂಡಿತವಾಗಿಯೂ ಅವಶ್ಯಕ ಮತ್ತು ಯುಕ್ತವಾಗಿದೆ.

ಇನ್ನೊಂದು ವಿಷಯವೇನೆಂದರೆ ಧರ್ಮಬುದ್ಧಿ ಇರುವ ಮಹನೀಯರು ತಮ್ಮ ಆಸ್ತಿಯನ್ನು ಸಾರ್ವಜನಿಕರ ಉಪಯೋಗಕ್ಕಾಗಿ ದಾನಪತ್ರ ಮಾಡಿಕೊಡಬೇಕಾದರೆ ಅಂಥಾ ಸಂದರ್ಭದಲ್ಲಿ ಸದಾ ವಿನಾಯಿತಿ ದೊರೆಯಬೇಕು. ಧರ್ಮಬುದ್ಧಿ ಇರತಕ್ಕ ಧರ್ಮಾತ್ಮರು ದೇಶದ ಹಿತದೃಷ್ಟಿಯಿಂದ ತಮ್ಮ ಸ್ವತ್ತನ್ನು ದಾನ ಮಾಡುವವರಾಗಿರುವುದರಿಂದ ಅಂತಹವರ ವಿಷಯದಲ್ಲಿ ವಿನಾಯಿತಿ ಕೊಡುವುದು ಅಗತ್ಯವಾಗಿದೆ. ನಾನು ಸೂಚಿಸಿರುವ ಬದಲಾವಣೆಗಳನ್ನು ಒಪ್ಪಿಕೊಳ್ಳುತ್ತೀರೆಂದು ನಂಬಿ ಈ ಮಸೂದೆಗೆ ನನ್ನ ಬೆಂಬಲವನ್ನು ಕೊಡುತ್ತೇನೆ.



**ಅದೇ ರೀತಿ, ವಿದೇಶಿಯರ ರಿಜಿಸ್ಟ್ರೇಷನ್ನಿಗೆ ಸಂಬಂಧದಲ್ಲಿ ಕಾಯ್ದೆಯ (ವ್ಯಾಪ್ತಿ ಹೆಚ್ಚಿಸುವ) ಮಸೂದಾ ಕಾನೂನಿನ ನಿಯಮಗಳ ವಿವರವನ್ನು ಮಲ್ಲಯ್ಯನವರು ಹೀಗೆ ಮನಗಂಡಿದ್ದಾರೆ. 1942ರ ಅಕ್ಟೋಬರ್ ಅಧಿವೇಶನದಲ್ಲಿ ಈ ಭಾಷಣ ದಾಖಲಾಗಿದೆ.**

## ಇನ್ಶೂರ್ ಮಾಡುವುದನ್ನು ಅವರಿಚ್ಛೆಗೇ ಬಿಡಬೇಕು

ಈಗ ತಾವು ತಂದಿರುವ ಮಸೂದಾ ಕಾನೂನಿನಲ್ಲಿ ಕೆಲವು ಕಷ್ಟತರವಾದ ವಿಷಯಗಳಿವೆಯೆಂದು ಯೋಚಿಸಬೇಕಾಗಿದೆ. ಮುಖ್ಯವಾಗಿ ಈಗ ತಾವು ಈ ಕಾನೂನನ್ನು ತಂದಿರುವ ರೀತಿಯಲ್ಲಿ ಯಾವ ಮನುಷ್ಯನು 20 ಸಾವಿರ ರೂಪಾಯಿ ಬೆಲೆಯಾಗತಕ್ಕ ಪದಾರ್ಥವನ್ನಿಟ್ಟುಕೊಂಡು ವ್ಯಾಪಾರವನ್ನು ನಡೆಸುತ್ತಿರುತ್ತಾನೆಯೋ ಅವನು ಕಡ್ಡಾಯವಾಗಿ ವಿಮೆ ಮಾಡಲೇಬೇಕಾಗಿದೆ, ಒಂದು ವಿಷಯವನ್ನು ತಾವು ಆಲೋಚನೆ ಮಾಡಬೇಕು. ಸಾಧಾರಣವಾಗಿ 20 ಸಾವಿರ ರೂಪಾಯಿ ಸರಕನ್ನು ಇಟ್ಟುಕೊಂಡಿರುವ ವ್ಯಾಪಾರಸ್ಥರು ನಮ್ಮಲ್ಲಿ ಅನೇಕರಿರುತ್ತಾರೆ. ನಿರ್ಬಂಧವಾಗಿ ಅವರೆಲ್ಲರೂ ವಿಮೆ ಮಾಡಬೇಕೆಂದರೆ ಅಷ್ಟು ಜನರೂ 'ಪ್ರೀಮಿಯಂ' ಕೊಡಬೇಕಾಗುತ್ತದೆ. ಮತ್ತು ಅಷ್ಟು ಹಣವೂ ನಮ್ಮಿಂದ ಹೊರಕ್ಕೆ ಹೋಗುತ್ತದೆ, ಆದುದರಿಂದ ವರ್ತಕರ ಹಿತ ದೃಷ್ಟಿಯಿಂದ ಈ ಕಾನೂನನ್ನು ಜಾರಿಗೆ ತರುವುದು ಒಳ್ಳೆಯದಲ್ಲವೆಂದು ನಾವು ಭಾವಿಸಬೇಕಾಗುತ್ತದೆ.

ಒಂದು ವೇಳೆ ನಮ್ಮ ಸರ್ಕಾರದವರೇ ನಮ್ಮ ದೇಶದಲ್ಲಿ ಇಂಥಾ ವಿಮೆಯ ಏರ್ಪಾಡುಮಾಡಿ ಈ ತೆರದ ಕಾನೂನು ಮಾಡಿದ್ದ ಪಕ್ಷದಲ್ಲಿ ಅದನ್ನು ಆಲೋಚನೆ ಮಾಡಬಹುದಾಗಿತ್ತು. ಈಗ ನಮ್ಮ ಸರ್ಕಾರದವರು ಜೀವವಿಮಾ ಕಂಪನಿಯನ್ನು ಆರಂಭಿಸಿದ್ದೀರಿ, ಅದರ ಪ್ರಜಾಶಾಖೆಯಲ್ಲಿ ನಮ್ಮ ದೇಶದ ಜನರು ಲಕ್ಷಾಂತರ ರೂಪಾಯಿ 'ಪ್ರೀಮಿಯಂ' ಪ್ರತಿವರ್ಷವೂ ಕೊಡುತ್ತಿದ್ದಾರೆ. ಅದೇ ರೀತಿಯಾಗಿ ಈಗಲೂ ಸಹ ಒಂದು ಏರ್ಪಾಟು ಮಾಡಿದ್ದ ಪಕ್ಷದಲ್ಲಿ ನಮ್ಮ ಜನರು ಕೊಡತಕ್ಕ ಹಣ

ನಮ್ಮ ದೇಶದಲ್ಲೇ ಇರುತ್ತಿತ್ತು. ಆದರೆ ತಾವು ಆ ಯೋಚನೆಯನ್ನೇ ಮಾಡಿಲ್ಲ. ನಮ್ಮ ಮಿತ್ರರಾದ ಶ್ರೀಮಾನ್ ಭೂಪಾಳಂ ಚಂದ್ರಶೇಖರಯ್ಯನವರು ಹೇಳಿದಂತೆ ಈ ತೆರದ ವಿಮೆಯಿಂದ ನಮ್ಮ ದೇಶದ ಜನಗಳ ಆಸ್ತಿ ಬೇರೆ ಕಡೆಗೆ ಇತರರ ಉಪಯೋಗಕ್ಕಾಗಿ ಹೊರಟು ಹೋಗುತ್ತದೆ. ಈ ಹಣ ನಮ್ಮ ಜನರಿಗೆ ವಾಪಸು ಒಂದು ಕಾಲದಲ್ಲಿ ಅಲ್ಲದಿದ್ದರೆ ಇನ್ನೊಂದು ಕಾಲದಲ್ಲಾದರೂ ಬರುತ್ತದೆಯೇ? ಹಾಗಿಲ್ಲದೆ ಹೋದ ಪಕ್ಷದಲ್ಲಿ ನಾವು ದುಡ್ಡನ್ನು ಕಳೆದುಕೊಂಡ ಹಾಗಾಯಿತೇ ಹೊರತು ಅದರಿಂದ ಪ್ರಯೋಜನವೇನು? ಒಂದು ವೇಳೆ ಏನಾದರೂ ಅನಾನುಕೂಲವೋ ನಷ್ಟವೋ ಸಂಭವಿಸಿದರಂತೂ ಅವರು ಪರಿಹಾರವನ್ನು ಕೊಡುತ್ತಾರೆ. ಏನೂ ಆಗದೆ ಇರುವ ಸಂದರ್ಭದಲ್ಲಿ ನಾವು ಕೊಟ್ಟಿರುವ ಹಣದಲ್ಲಿ ಯಾವುದೊಂದು ಭಾಗವೂ ಸಹ ನಮ್ಮ ಜನರಿಗೆ ಬರುವ ಹಾಗಿಲ್ಲವಲ್ಲ.

ಇದಲ್ಲದೆ ಈ ಕಾನೂನಿನ ಮೇರೆಗೆ ವಿಮೆಯನ್ನು ಕಡ್ಡಾಯವಾಗಿ ಮಾಡಬೇಕಾಗಿದೆ. ಇದರಿಂದ ನಮ್ಮವರಿಗೆ ಏನು ಪ್ರಯೋಜನವೂ ಸಹ ಆಗದಿರುವ ಸಂಭವವಿರುವುದರಿಂದ ಇದನ್ನು ಕಡ್ಡಾಯಪಡಿಸುವುದು ಸೂಕ್ತವಲ್ಲ. ಈಗ ನಮ್ಮಲ್ಲಿ ಓರಿಯಂಟಲ್ ಕಂಪೆನಿ, ನ್ಯೂ ಇಂಡಿಯಾ ಲೈಫ್ ಇನ್ಸೂರೆನ್ಸ್ ಕಂಪೆನಿ ಮುಂತಾದ ನಾನಾ ವಿಮಾ ಕಂಪೆನಿಗಳು ಇಲ್ಲವೇ? ಅವರೇನೂ ಕಡ್ಡಾಯಪಡಿಸುವುದಿಲ್ಲ. ಹಾಗೆಯೇ ಇನ್ಶೂರ್ ಮಾಡುವುದನ್ನು ಅವರವರ ಇಚ್ಛೆಗೇ ಬಿಡಬೇಕು.

**ಪ್ರೆಸಿಡೆಂಟರು**–ಈಗ ತಂದಿರುವ ವಿಮಾ ಏರ್ಪಾಟು ಎಲ್ಲಾ ದೇಶಗಳಲ್ಲಿಯೂ ನಿರ್ಬಂಧವಾಗಿಯೇ ಜಾರಿಯಲ್ಲಿದೆ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** ನಾವೂ ಹಾಗೆ ಮಾಡುವುದು ಸರಿಯಲ್ಲ ಅಥವಾ ಆ ಹಣವಾದರೂ ನಮ್ಮ ಬಳಿ ಇದ್ದರೆ ಕಡ್ಡಾಯ ಮಾಡಿದರೂ ಚಿಂತೆ ಇಲ್ಲವೆಂದು ಹೇಳಬಹುದು.

**ಪ್ರೆಸಿಡೆಂಟರು**–ನಾವೇ ಈ ಜವಾಬ್ದಾರಿಯನ್ನಿಟ್ಟುಕೊಂಡರೆ ಒಂದು ಸಮಯದಲ್ಲಿ ನಾವು ಬಹಳವಾಗಿ ನಷ್ಟಕ್ಕೆ ಸಿಕ್ಕಬಹುದು. ಈ ವಿಮೆಯ ಏರ್ಪಾಟಿನಿಂದ ಬಹಳ ಲಾಭ ಬರುತ್ತದೆಂಬ ಭಾವನೆ ತಮಗೆ ಇದೆಯೆಂದು ಕಾಣುತ್ತದೆ. ಲಾಭ ಬಂದರೆ ಸ್ವಲ್ಪ ಬರಬಹುದು; ಆದರೆ ನಷ್ಟವಾದರೆ ಬಹಳವಾಗಿ ಆಗುತ್ತದೆ. ಆದುದರಿಂದ ಈ ಯೋಜನೆಯನ್ನು ನಾವೇ ನಿರ್ವಹಿಸುವುದು ಸಾಧ್ಯವಲ್ಲ.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು:** ಅದು ಯಾವ ರೀತಿ ಆಗುತ್ತದೆಂದು ಹೇಳುವುದಕ್ಕಾಗುವುದಿಲ್ಲ. ಹಾಗೆ ಇಂಡಿಯಾ ಸರ್ಕಾರದವರೇ ಇದನ್ನು ವಹಿಸಿಕೊಳ್ಳಬೇಕೆಂದರೆ ಯಾರು ಯಾರು ವಿಮೆ ಮಾಡಲು ಒಪ್ಪುತ್ತಾರೋ ಅವರು ಮಾತ್ರ ಮಾಡಲಿ. ನಿರ್ಬಂಧಪಡಿಸಬೇಡಿ. ಯಾರು ವಿಮೆ ಮಾಡುವುದಿಲ್ಲವೋ ಅಂಥವರನ್ನು ಶಿಕ್ಷೆಗೆ ಗುರಿಮಾಡಲಾಗುವುದು ಎಂದು ಈ ಮಸೂದಾ ಕಾನೂನಿನಲ್ಲಿದೆ. ಅದರಿಂದ ಬಹಳ ತೊಂದರೆಯಾಗುತ್ತದೆ.

**ಪ್ರೆಸಿಡೆಂಟರು**–ಪ್ರಪಂಚದಲ್ಲಿ ಎಲ್ಲ ದೇಶಗಳಲ್ಲಿಯೂ ಇಂಥ ವಿಷಯವನ್ನು ನಿರ್ಬಂಧವಾಗಿಯೇ ಮಾಡತಕ್ಕುದ್ದು.

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು** ಈಗಿನ ಪರಿಸ್ಥಿತಿಯಲ್ಲಿ ಇದನ್ನು ಬಲಾತ್ಕಾರ ಮಾಡುವುದು ಸರಿಯಲ್ಲ. ಇದನ್ನು ತಾವು ಮತ್ತೊಂದು ಸಲ ಪರ್ಯಾಲೋಚನೆ ಮಾಡಬೇಕೆಂದು ಪ್ರಾರ್ಥನೆ.

**ಪ್ರೆಸಿಡೆಂಟರು**–ಇನ್ನು ಯಾವುದಾದರೂ ಸಲಹೆ ಇದೆಯೋ?

**ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು**–ತಾವು ಇದನ್ನು ಪುನಃ ಪರ್ಯಾಲೋಚನೆ ಮಾಡಬೇಕು. ಇದರಲ್ಲಿ ವಿಧಾಯಕ ಮಾಡಿರುವ ನಿರ್ಬಂಧವನ್ನು ತೆಗೆದು ಹಾಕಿ ಇದನ್ನು ಈ ಸಲವೇ ಇತ್ಯರ್ಥ ಮಾಡದೆ ಮುಂದಿನ ಸಭೆಗೆ ತಂದ ಪಕ್ಷದಲ್ಲಿ ನಾವೆಲ್ಲರೂ ಇದನ್ನು ಅನುಮೋದಿಸುವುದಕ್ಕೆ ಅನುಕೂಲವಾಗುತ್ತದೆ. ಈಗಿರುವ ರೀತಿಯಲ್ಲಿ ಇದಕ್ಕೆ ನಾವು ಬೆಂಬಲ ಕೊಡಲಾರೆವು. ಆದುದರಿಂದ ನಾನು ಇದನ್ನು ವಿರೋಧಿಸಬೇಕಾಗಿದೆ.



**1904ನೇ ಇಸವಿಯ ಕ್ರಿಮಿನಲ್ ಪ್ರೊಸೀಜರ್ ಕೋಡ್ (ತಿದ್ದುಪಡಿ) ಮಸೂದಾ ಕಾನೂನಿನ ತತ್ವ ಮತ್ತು ಸಾಮಾನ್ಯ ನಿಯಮಗಳನ್ನು ಅಂಗೀಕಾರಕ್ಕೆ ಮುನ್ನ ಮಲ್ಲಯ್ಯನವರು 5.6.1945ರಂದು ಮಾಡಿದ ಪರ್ಯಾಲೋಚನೆ.**

**ಈ ತಿದ್ದುಪಡಿ ನಮ್ಮ ಸೋದರಿಯರಿಗೆ ಅನುಕೂಲ**

ಸ್ವಾಮಿ, ಈಗ ತಂದಿರುವ ತಿದ್ದುಪಡಿ ಮಸೂದಾ ಕಾನೂನನ್ನು ಶ್ರೀಮತಿ ಲಕ್ಷ್ಮೀದೇವಮ್ಮ ನವರು ವಿರೋಧಿಸುತ್ತಾ ಒಂದೆರಡು ಆಕ್ಷೇಪಣೆಗಳನ್ನು ಮಾಡಿದರು. ಈಗ ತಂದಿರುವ ತಿದ್ದುಪಡಿ ಮಸೂದೆಯ ವಿವರಣೆಯ ಮೊದಲನೆ ಭಾಗದಲ್ಲಿ ಈ ರೀತಿ ಇದೆ ಒಬ್ಬರನ್ನು ವಿವಾಹವಾಗಿದ್ದು ಅವರು ಬದುಕಿರುವಾಗಲೇ ಮತ್ತೊಬ್ಬರನ್ನು ವಿವಾಹಮಾಡಿಕೊಂಡಿರುವುದು ಅಪರಾಧವೆಂದು ವಿಧಾಯಕವಾಗಿರುವ ಸಂದರ್ಭದಲ್ಲಿ ಫಿರ್ಯಾದು ಮಾಡಬೇಕಾದರೆ ಆ ಬಗೆಯ ಎರಡನೆಯ ವಿವಾಹದಿಂದ ಬಾಧಕಹೊಂದಿರುವ ಯಾವ ಆಸಾಮಿಯಾಗಲಿ ಫಿರ್ಯಾದು ಮಾಡಬೇಕು ಎಂದು" ಯಾವುದಾದರು ಹೆಂಗಸರ ಗಂಡಂದಿರು ಹೊರಗೆ ಹೋಗಿರುವ ಸಂದರ್ಭದಲ್ಲಿ ದುರಾಶೆಯಿಂದ ಅಥವಾ ದುರುದ್ದೇಶದಿಂದ ಕೆಲವು ಜನರು ಆ ಹೆಂಗಸರ ಗಂಡಂದಿರಿಗೆ ತಪ್ಪು ತಿಳುವಳಿಕೆ ಕೊಟ್ಟು ನಿರಪರಾಧಿ ಹೆಂಗಸರನ್ನು ಕೋರ್ಟಿಗೆ ಎಳೆದು ವ್ಯವಹಾರವನ್ನು ಹೂಡುವುದನ್ನು ತಪ್ಪಿಸುವುದಕ್ಕೆ ಸಹಾಯವಾಗುವುದಕ್ಕೆ ಇದನ್ನು ತಂದಿದ್ದಾರೆಂದು ಹೇಳಿದರು. ಆದರೆ ವಾಸ್ತವವಾಗಿಯೂ ಈ ರೀತಿಯ ಸಂದರ್ಭ ಒದಗಿದ್ದರೂ ಕೂಡ ಕೋರ್ಟಿನಲ್ಲಿ ಹೋಗಿ ರುಜುವಾತುಕೊಟ್ಟ ಮೇಲೆ ಅವರ ಆಸ್ತಿಯನ್ನು ಅಪಹಾರಮಾಡುವುದಕ್ಕಾಗಲಿ ಅಥವ ಆ ಹೆಂಗಸಿಗೆ ಸೇರಬೇಕಾದ ಹಕ್ಕುಬಾಧ್ಯತೆಯನ್ನು ಕಸಿದುಕೊಳ್ಳುವುದಕ್ಕೆ ಕೋರ್ಟಿನ ತೀರ್ಮಾನವಿಲ್ಲದೆ ವಿಲೇವಾರಿಮಾಡಲು ಅವಕಾಶವಿಲ್ಲವೆಂದು ಕಾಣುತ್ತದೆ. ಆದುದರಿಂದ ಈ ವಿಚಾರದಲ್ಲಿ ಅವರು ಯಾವ ವಿಧವಾದ ಶಂಕೆ ಮತ್ತು ಅನುಮಾನ ಪಡಬೇಕಾದ ಅವಶ್ಯಕತೆ ಇಲ್ಲವೆಂದು ನನ್ನ ಭಾವನೆ.

ನಿಶ್ಯಕ್ತರಾಗಿ ಮತ್ತು ನಿರಪರಾಧಿಗಳಾಗಿದ್ದವರಿಗೆ ದುಷ್ಟರೂ ಬಲಾಢ್ಯರೂ ತೊಂದರೆ ಕೊಟ್ಟರೆ ಅವರನ್ನು ತಕ್ಷಣ ಕೋರ್ಟಿಗೆ ಕರೆದುಕೊಂಡು ಹೋಗಿ ಅವರ ಮೇಲೆ ಕ್ರಮಜರುಗಿಸಿ ಶಿಕ್ಷೆ ವಿಧಿಸುವುದಕ್ಕೆ ಹೆಚ್ಚು ಅವಕಾಶವು ಈ ತಿದ್ದುಪಡಿಯಿಂದ ಉಂಟಾಗುತ್ತದೆ ಎಂದು ನಾನು ಭಾವಿಸುತ್ತೇನೆ. ನಾನು ಮೊದಲೇ ಹೇಳಿದ ಹಾಗೆ ಒಟ್ಟಿನಲ್ಲಿ ಈ ತಿದ್ದುಪಡಿಯು ನಮ್ಮ ಸಹೋದರಿಯರಿಗೆ ಹೆಚ್ಚು ಅನುಕೂಲವನ್ನು ಮತ್ತು ಸೌಕರ್ಯವನ್ನೂ ಕಲ್ಪಿಸುತ್ತದೆಂದು ನಾನು ಭಾವಿಸುತ್ತೇನೆ.

ನಮ್ಮ ಕಾಂಗ್ರೆಸ್ ಮಿತ್ರರಾದ ಶ್ರೀ ಕೆ. ಶಾಮರಾಜ ಐಯ್ಯಂಗಾರ್ಯರು ಮಾತನಾಡುತ್ತ, ಈ ವಿಚಾರದಲ್ಲಿ ಯಾವುದೊಂದು ಮೊಕದ್ದಮೆಯೂ ಬಂದು ತೀರ್ಮಾನವಾಗಿಲ್ಲ, ಬ್ರಿಟಿಷ್ ಇಂಡಿಯಾದಲ್ಲಿ ಜಾರಿಗೆ ತಂದಿದ್ದಾರೆ ಎಂದು ಇಲ್ಲಿಯೂ ಸಹ ತಂದಿದ್ದಾರೆ ಎಂದು ಹೇಳಿದರು. ಆದರೆ ನಮ್ಮ ದೇಶದಲ್ಲಿರುವ ಜನರಿಗೆ ಅನುಕೂಲವಾಗುವಂತೆ ಒಂದು ಮಸೂದಾ ಕಾನೂನನ್ನು ಬೇರೆಯಾರಾದರೂ ಮಾಡಲಿ ಅಥವ ಮಾಡದೆ ಇರಲಿ. ನಮ್ಮ ಸರ್ಕಾರದವರು ಮಾಡಿದರೆ ಅದಕ್ಕೆ ಅಡ್ಡಿ ಮಾಡಿದರೆ ಅಥವ ಅನುಮಾನಪಟ್ಟರೆ ಉಪಯೋಗವಾಗುವುದಿಲ್ಲವೆಂದು ನಾನು ಹೇಳುತ್ತೇನೆ. ಮುಖ್ಯವಾಗಿ ಯಾರ ವಿಷಯದಲ್ಲಿಯೇ ಆಗಲಿ ಪ್ರತಿಯೊಬ್ಬರಿಗೂ ಪ್ರೀತಿ ಮತ್ತು ದಯೆ ಇರಬೇಕು. ಹಾಗಿರುವಾಗ ಹೆಂಗಸರ ವಿಚಾರದಲ್ಲಿ ಹೆಚ್ಚು ಅನುಕೂಲವಾಗಲಿರುವ ಈ ತಿದ್ದುಪಡಿ ಮಸೂದೆಗೆ ಎಲ್ಲರೂ ಬೆಂಬಲವನ್ನು ಕೊಡುತ್ತಾರೆ, ಶ್ರೀಮತಿ ಲಕ್ಷ್ಮೀದೇವಮ್ಮನವರೂ ಸಹ ಬೆಂಬಲಕೊಡುತ್ತಾರೆಂದು ನಂಬಿದ್ದೇನೆ.



**1947ರ ಮೇ 29ರಂದು ಮಲ್ಲಯ್ಯನವರು ಸರಬರಾಜಿನ ಕೆಲಸಗಳಿಗೆ ಸಂಬಂಧಪಟ್ಟ ವ್ಯವಸ್ಥೆಯನ್ನು ಬಲಪಡಿಸುವ ಬಗ್ಗೆ ಮೌಲಿಕ ಚಿಂತನಧಾರೆಯನ್ನು ಹರಿಸಿದ್ದಾರೆ. ಇದೊಂದು ಗಮನಾರ್ಹ ಭಾಷಣ.**

## ಹತೋಟಿ ಆಜ್ಞೆಗಳಿಂದ ತೊಂದರೆಯಾಗಿದೆ

ಈ ಮಸೂದಾ ಕಾನೂನಿನ ವಿಚಾರದಲ್ಲಿ ನಾನು ಒಂದೆರಡು ವಿಷಯಗಳನ್ನು ತಮ್ಮ ಗಮನಕ್ಕೆ ತರಬೇಕೆಂದಿದ್ದೇನೆ. ಈ ಮಸೂದಾ ಕಾನೂನಿನ ವಿಷಯದಲ್ಲಿ ಮಾತನಾಡುವುದಕ್ಕೆ ಮೊದಲು ಒಂದೆರಡು ವಿಷಯಗಳನ್ನು ಪ್ರಸ್ತಾಪ ಮಾಡಿದ ಮೇಲೆ ಈ ಮಸೂದಾ ಕಾನೂನಿನ ಮೇಲೆ ನನ್ನ ಅಭಿಪ್ರಾಯವನ್ನು ಸೂಚಿಸುತ್ತೇನೆ. ನೆನ್ನೆಯ ದಿವಸ ಕಾಂಗ್ರೆಸ್ ಸಹೋದರರು ಈ ಮಸೂದಾ ಕಾನೂನುಗಳನ್ನು ಈ ಸಭೆಯ ಮುಂದೆ ಮಂಡಿಸುವ ಕಾಲದಲ್ಲಿ ನಾವು ಈ ಮಸೂದಾ ಕಾನೂನಿಗೆಲ್ಲಾ ನಮ್ಮ ಬೆಂಬಲವಿಲ್ಲ ಆದಕಾರಣ ನಾವು ಸಭಾ ತ್ಯಾಗಮಾಡುತ್ತೇವೆ ಎಂದು ಹೇಳಿ ಹೊರಟು ಹೋದರು. ಇದು ಬಹಳ ವ್ಯಸನಕರವಾದ ವಿಚಾರ ಆಗಲೇ ನಮ್ಮ ಶ್ರೀಮಾನ್ ಎಂ. ಲಿಂಗೇಗೌಡರು ಹೇಳಿದ ಹಾಗೆ ಕೆಲವರು ರಾಜಕೀಯ ವಿಚಾರಗಳಲ್ಲಿ ನಮ್ಮ ಕಾಂಗ್ರೆಸ್ ಮಿತ್ರರುಗಳ ಪರವಾಗಿಯೋ ಅಥವಾ ವಿರೋಧವಾಗಿಯೋ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಮೇಲೆ ಅದಕ್ಕೆ ಪ್ರತಿತ್ಯುತ್ತರವಾಗಿ ನಾವು ತಿಳಿಸುವ ಅಂಶಗಳನ್ನು ಅವರು ಕೇಳಲು ನಮಗೆ ಅವಕಾಶವನ್ನು ಕಲ್ಪಿಸಿಕೊಡದೆ ಹೊರಟು ಹೋದುದು ವಿಷಾದಕರವಾದ ಸಂಗತಿಯೆಂದು ತಿಳಿಸಬೇಕಾಗಿದೆ ಸರ್ಕಾರದವರು ಏನು ಹೇಳಿದರೂ ಸಹ ಆ ಹೊರಗಡೆ ಹೋದ ಸದಸ್ಯರುಗಳಿಗೆ ತಮಗೆ ತೋರಿದ ಅಭಿಪ್ರಾಯಗಳನ್ನು ತಿಳಿಸುವುದರ ಜೊತೆಗೆ ಓಟನ್ನು ಚಲಾಯಿಸುವ ಹಕ್ಕು ಇದ್ದುದರಿಂದ ಸಭೆಯಲ್ಲಿ ಇದ್ದು ಚಲಾಯಿಸಬಹುದಾಗಿತ್ತು ಹಾಗೆ ಅವಕಾಶವಿದ್ದಾಗ ಸಹ ಅವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸದೆ ಮತ್ತು ಇತರರ ಅಭಿಪ್ರಾಯಗಳನ್ನು

ಕೇಳದೆ ಹೊರಟುಹೋದುದು ಸರಿಯಲ್ಲ. ಅವರು ತಮ್ಮ ಅಭಿಪ್ರಾಯವನ್ನು ಮಾತ್ರ ತಿಳಿಸಿ ಹೊರಟುಹೋಗುವುದು ಸಮಂಜಸವಲ್ಲ. ಅವರು ಸಭೆಯನ್ನು ಬಿಟ್ಟು ಹೊರಗಡೆ ಹೋಗುವುದಕ್ಕೆ ಮುಂಚೆ ತಿಳಿಸಿದ ಹೇಳಿಕೆಯಲ್ಲಿ ಅವರು ಮೈಸೂರು ದೇಶದಲ್ಲಿರುವ ಸಮಸ್ತ ಪ್ರಜಾವರ್ಗದವರ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತಿದ್ದೇವೆ ಮತ್ತು ಅವರ ಅಭಿಪ್ರಾಯಗಳನ್ನು ತಿಳಿಸುತ್ತಿದ್ದೇವೆ ಎಂದು ಹೇಳಿದರು. ಅವರು ಕೊಟ್ಟಿರುವ ಹೇಳಿಕೆಯು ಎಷ್ಟುಮಟ್ಟಿಗೆ ಸತ್ಯ ಬಾಹಿರವಾದದ್ದು ಎಂದು ಮಾತ್ರ ನಾನು ತಿಳಿಸಬೇಕೆಂದು ಅಪೇಕ್ಷಿಸುತ್ತೇನೆ. ಅವರು ಹೇಳಿರುವ ಅಭಿಪ್ರಾಯವು ಸರಿಯಾದುದಲ್ಲ. ಅದು ದೇಶದ ಅಭಿಪ್ರಾಯವನ್ನು ಪ್ರತಿಬಿಂಬಿಸುವುದಿಲ್ಲ. ಅದು ಒಂದು ಪಕ್ಷ ಅಭಿಪ್ರಾಯವನ್ನು ಮಾತ್ರ ಪ್ರತಿಬಿಂಬಸಬಹುದೇ ಹೊರತು ದೇಶದ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತದೆಯೆಂದು ಹೇಳುವುದು ಅಷ್ಟು ಸರಿಯಿಲ್ಲವೆಂದು ಹೇಳಬೇಕಾಗಿದೆ. ಈಗ ನಮ್ಮ ಸಂಸ್ಥಾನದ ದಿವಾನರು ದೇಶದಲ್ಲಿರುವ ಅನೇಕ ರಾಜಕೀಯ ಪಕ್ಷಗಳ ಮುಖಂಡರುಗಳನ್ನು ಕರೆಸಿಕೊಂಡು ಒಂದು ವಿಧವಾದ ಸೌಹಾರ್ದವಾದ ವಾತಾವರಣವನ್ನು ಕಲ್ಪನೆಮಾಡಬೇಕೆಂದು ಅಭಿಪ್ರಾಯಹೊಂದಿ ಅದಕ್ಕೆ ತಕ್ಕಂತೆ ಕಾರ್ಯ ನಡೆಸುತ್ತಿರುವ ಸಂದರ್ಭದಲ್ಲಿ ಯಾವ ರಾಜಕೀಯ ಪಕ್ಷದ ಮಹನೀಯರಾಗಲೀ ಈ ಕಾಲದಲ್ಲಿ ಒಂದು ಕಹಿಯಾದ ವಾತಾವರಣವನ್ನು ಕಲ್ಪನೆ ಮಾಡುವುದು ದೇಶದ ಹಿತದೃಷ್ಟಿಯಿಂದ ಒಳ್ಳೆಯದಲ್ಲ. ಮೈಸೂರು ದೇಶದ ಸಮಸ್ತ ಪ್ರಜಾವರ್ಗದವರಿಗೂ ಅನುಕೂಲವಾಗಲಿ ಎಂಬ ಉದ್ದೇಶದಿಂದ ನಮ್ಮನ್ನಾಳುವ ಶ್ರೀಮಾನ್ಯಮಹಾರಾಜರವರು ಅಪ್ಪಣೆಯಿತ್ತ ಘೋಷಣೆಯಲ್ಲ ದಿವಾನರಿಗೆ ನಮ್ಮ ಸಂಸ್ಥಾನಕ್ಕೆ ಹೆಚ್ಚಿನ ಸುಧಾರಣೆಗಳನ್ನು ಜಾರಿಗೆ ತರುವ ವಿಚಾರದಲ್ಲಿ ಸಲಹೆಗಳನ್ನು ಕೊಡುವ ಅಧಿಕಾರವನ್ನು ಕೊಟ್ಟಿರುವಾಗ, ಅವರಿಗೆ ಈಗ ಎಲ್ಲರೂ ದೇಶದ ಹಿತದೃಷ್ಟಿಯಿಂದ ಮತ್ತು ದೇಶದ ಹಿತವನ್ನು ರಕ್ಷಣೆಮಾಡುವ ಸುಧಾರಣೆ ಬರಲಿ ಎಂಬ ಉದ್ದೇಶದಿಂದ ಅವರಿಗೆ ನೆರವಾಗಬೇಕೇ ಹೊರತು, ಅದಕ್ಕೆ ಲೋಪಬರುವ ಹಾಗೆ ಅಭಿಪ್ರಾಯಗಳನ್ನು ಇಟ್ಟುಕೊಂಡು ಮುಂದುವರಿಯುವುದು ಸರ್ವಥಾನ್ಯಾಯವಾದುದಲ್ಲ. ಹಾಗೆ ಯಾರೂ ಮಾಡಬಾರದೆಂಬುದೇ ನನ್ನ ಆಶೆ. ಇದೇ ವಿಧವಾದ ಆಸೆಯನ್ನು ನನ್ನ ಇತರ ಮಿತ್ರರೂ ಇಟ್ಟುಕೊಂಡು ಸುವ್ಯವಸ್ಥಿತವಾದ ಮತ್ತು ಸಿಹಿಯಾದ ವಾತಾವರಣವು ಕಲ್ಪನೆಯಾಗುವುದಕ್ಕೆ ಪ್ರಯತ್ನ ಮಾಡಬೇಕೆಂದು ಕೇಳಿಕೊಳ್ಳುತ್ತೇವೆ.

ಇನ್ನು ಈ ಮಸೂದಾ ಕಾನೂನಿನ ವಿಚಾರದಲ್ಲಿ ಒಂದೆರಡು ವಿಷಯಗಳನ್ನು ಹೇಳಬೇಕಾಗಿದೆ. ಈ ವಿಷಯದ ಮೇಲೆ ಚರ್ಚೆ ಪ್ರಾರಂಭವಾಗುವುದಕ್ಕೆ ಮುಂಚೆ ದಿವಾನರು ಒಂದು ವಿಷಯವನ್ನು ತಿಳಿಸಿದರು. ಈ ಮಸೂದೆ ಕಾನೂನು ಹೊಸದೇನೂ ಅಲ್ಲ. ಇದು ಮೊದಲು ಜಾರಿಯಿದ್ದುದೇ. ಅದು ಹಂಗಾಮಿಯಾಗಿರುವುದರ ಬದಲಿ ಖಾಯಂ ಆಗಿ ನಮ್ಮ 'ಸ್ಟ್ಯಾಚೂಟ್' ಬುಕ್‌ನಲ್ಲಿ ಇರಲಿ ಎಂಬ ಅಭಿಪ್ರಾಯದಿಂದ ಇದನ್ನು ತರಲಾಗಿದೆ ಎಂದು ತಿಳಿಸಿದರು. ಎರಡನೆಯದಾಗಿ, ಬ್ರಿಟಿಷ್ ಇಂಡಿಯಾದಲ್ಲಿ ಈ ರೀತಿಯ ಒಂದು ಕಾನೂನು ಖಾಯಂ ಆಗಿ ಜಾರಿಗೆ ಬಂದಿರುವುದರಿಂದ ಅದಕ್ಕನುಸಾರವಾಗಿ ನಾವು ಸಹ ಬಂದಿರುವುದರಿಂದ ಅದಕ್ಕನುಸಾರವಾಗಿ ನಾವು ಸಹ ಇಲ್ಲಿ ಒಂದು ಕಾನೂನನ್ನು ಜಾರಿಗೆ ತರಬೇಕಾದ ಅತ್ಯಗತ್ಯವೆಂದು ಅವರು ಹೇಳಿದರು. ಇದಲ್ಲದೆ ಇನ್ನೊಂದು ವಿಷಯವನ್ನು ಅವರು ಹೇಳಿದರು. ಈ ಮಸೂದಾ ಕಾನೂನಿನ ವಿಷಯ ಚರ್ಚೆಮಾಡುವಾಗ

ಹತೋಟಿಗೆ ಸಂಬಂಧಪಟ್ಟ ವಿಷಯಗಳನ್ನು ಚರ್ಚೆಮಾಡುತ್ತಾ ಹೋದರೆ ಅದರ ಚರ್ಚೆಯು ಕೊನೆಮುಟ್ಟುದಕ್ಕೆ ಸಾಧ್ಯವಿಲ್ಲ. ಅದರ ವಿಚಾರ ಎಷ್ಟುಬೇಕಾದರೂ ಮಾತನಾಡಬಹುದು. ಆದುದರಿಂದ ಹತೋಟಿಗಳ ವಿಷಯ ಬಿಟ್ಟುಬಿಡಬೇಕೆಂದು ಅವರು ಹೇಳಿದರು. ಇದು ನಿಜ. ಆದರೆ ಈ ದಿವಸ ಈ ಮಸೂದಾ ಕಾನೂನು ಕಾನೂನನ್ನಾಗಿ ಮಾಡಿ ಸ್ಟ್ಯಾಚೂಟ್ ಬುಕ್ಕಿನಲ್ಲಿ ಸೇರಿ ಕೂಡದು ಎಂದು ಹೇಳಬೇಕಾದರೆ, ಹತೋಟಿಗಳ ಆಜ್ಞೆಯ ವಿಚಾರ ಹೇಳುವುದು ಸಮಂಜಸವಾಗಿದೆ. ಮತ್ತು ಅದು ಸರಿಯಾದ ಮಾರ್ಗ. ಹಾಗೆ ನಾವು ಅದು ಬೇಡ ಎಂಬುದಕ್ಕೆ ಕಾರಣಗಳನ್ನು ಕೊಡಬೇಕಾದರೆ ನಮಗಿರುವ ಕಷ್ಟಗಳನ್ನು ಹೇಳಲೇಬೇಕು. ಏಕೆ ನಮಗೆ ಈ ಕಾನೂನು ಬೇಡ, ನಮಗೆ ಏನು ಅನಾನುಕೂಲವಿದೆ ಎಂಬ ವಿಷಯ ಹೇಳಬೇಕಾದರೆ ಇರುವ ತೊಂದರೆಗಳನ್ನು ಹೇಳದೆಹೋದರೆ, ಕರ್ತವ್ಯ ಪರಿಪಾಲನೆ ಮಾಡಿದಂತಾಗುವುದಿಲ್ಲ ಆದುದರಿಂದ ಹತೋಟಿ ಆಜ್ಞೆಗಳಿಂದ ಆಗಿರುವ ತೊಂದರೆಗಳನ್ನು ತಿಳಿಸಲು ಅಧ್ಯಕ್ಷರು ಅಪ್ಪಣೆಕೊಟ್ಟರೆ ನಮಗೆ ಈ ಕಾನೂನು ಏಕೆ ಬೇಡ ಎಂಬುದನ್ನು ತಿಳಿಸುವುದಕ್ಕೆ ಅವಕಾಶವಾಗುತ್ತದೆ. ಅದಕ್ಕೆ ಅವರು ಅವಕಾಶ ಕೊಡಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

ಈ ಮಸೂದಾ ಕಾನೂನಿಗೆ ನಮ್ಮ ಮಾನ್ಯ ಮಿತ್ರರಾದ ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯನವರು ಒಂದು ತಿದ್ದುಪಡಿಯನ್ನು ಸೂಚಿಸಿದ್ದಾರೆ. ಈ ಮಸೂದಾ ಕಾನೂನಿನಲ್ಲಿ ನಮೂದಿಸಿರುವ ಅನೇಕ ಪ್ರಕರಣಗಳ ಅವಶ್ಯಕತೆ ಏನೂ ನಮಗೆ ಕಾಣುವುದಿಲ್ಲ. ಯುದ್ಧವು ಪ್ರಾರಂಭವಾದ ಮೇಲೆ ಬ್ರಿಟಿಷ್ ಇಂಡಿಯಾದಲ್ಲಿ ಜಾರಿ ತಂದ ಕಾನೂನುಗಳನ್ನು ತಾವು ಒಂದೊಂದಾಗಿ ಇಲ್ಲಿಯೂ ಜಾರಿಗೆ ತರಬೇಕಾಗಿ ಬಂತು, ಆಗ ಶತೃಗಳು ನಮ್ಮ ಮನೆಯ ಬಾಗಿಲ ಬಳಿಗೆ ಬಂದು ನಿಂತಿರುವುದರಿಂದ ಯಾವ ಕ್ಷಣದಲ್ಲಿ ಅವರು ನಮ್ಮನ್ನು ಆವರಿಸಿ, ಅದರಿಂದ ನಮಗೆ ಅಪಾಯವಾಗುತ್ತದೆಯೋ ಎಂಬ ಭೀತಿ ಇತ್ತು. ಆಗ ಪರಿಸ್ಥಿತಿ ಯಾವ ರೀತಿ ಇರುತ್ತದೆಯೆಂದು ಊಹಿಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಅಂಥ ಸಮಯದಲ್ಲಿ ಸರ್ಕಾರದವರು ಯಾವ ಕಾನೂನನ್ನು ತರಲಿ, ಅವುಗಳೆಲ್ಲವನ್ನೂ ಕೂಡ ನಾವು ಸಂತೋಷದಿಂದ ಒಪ್ಪಿಕೊಂಡು ಅವುಗಳಿಗೆ ತಲೆಬಾಗಿ ಒಪ್ಪಿಗೆ ಕೊಟ್ಟೆವು ಆದರೆ ಈಗ ಆ ಹತೋಟಿ ಆಜ್ಞೆಗಳನ್ನು ಖಾಯಂ ಆಗಿ ಇಡಬೇಕೇ ಎಂಬ ಅಂಶವನ್ನು ಸ್ವಲ್ಪ ಮೊದಲಾಗಿದೆ. ಈಗ ನೋಡಬೇಕಾಗಿದೆ ನಮಗೆ ಶತೃ ಯುದ್ಧ ಭಯವಿಲ್ಲ. ಈಗ ನಿವಾರಣೆಯಾಯಿತು. ಪ್ರಪಂಚವನ್ನು ಆಕ್ರಮಣ ಮಾಡಬೇಕೆಂದು ಯಾರು ಪ್ರಯತ್ನಪಡಲು ಹೊರಟಿದ್ದರೋ ಅವರೆಲ್ಲರೂ ಈಗ ನಮ್ಮ ಅಧೀನರಾಗಿದ್ದಾರೆ, ಆದುದರಿಂದ ನಮಗೆ ಯುದ್ಧದ ಭಯವಿಲ್ಲ. ಆದರೆ, ಯುದ್ಧದ ದೆಸೆಯಿಂದ ಉಂಟಾಗಿರತಕ್ಕ ಅವ್ಯವಸ್ಥೆ ಇನ್ನೂ ಇದೆ. ಈ ಪರಿಸ್ಥಿತಿಯನ್ನು ಹೋಗಲಾಡಿಸಿ ಒಂದು ವ್ಯವಸ್ಥೆಗೆ ತರಲು ಸರ್ಕಾರದವರಿಗೆ ಕೆಲವು ಸಾಧನೆಗಳು ಬೇಕಾಗಬಹುದು. ಈ ದೃಷ್ಟಿಯಿಂದ ಅವರಿಗೆ ಸಹಾಯವಾಗುವಂಥ ಒಂದು ಕಾನೂನು ಮಾಡಬೇಕೆಂದು ಅವರು ಹೇಳಿ ಅದನ್ನು ನಮ್ಮ ಮುಂದೆ ಇಟ್ಟಿಲ್ಲ. ಸರ್ಕಾರದವರು ಪ್ರಜೆಗಳ ಹಿತದೃಷ್ಟಿಯಿಂದ ಮತ್ತು ಅವರಿಗೆ ಅನುಕೂಲವನ್ನು ಮಾಡುವುದಕ್ಕೆ ಈ ಮಸೂದೆಯನ್ನು ತಯಾರುಮಾಡಿ ನಮ್ಮ ಮುಂದೆ ಇಟ್ಟಿಲ್ಲ. ಸರ್ಕಾರದವರು ಕೇಳುತ್ತಿರುವುದೇನೆಂದರೆ ಬ್ರಿಟಿಷ್

ಇಂಡಿಯಾದಲ್ಲಿ ಈ ರೀತಿಯ ಒಂದು ಕಾನೂನನ್ನು ಯಾವರೀತಿ ಮಾಡಿದ್ದಾರೋ ಹಾಗೆ ಇಲ್ಲಿಯೂ ಸಹ ಒಂದ ಕಾನೂನನ್ನು ಮಾಡಲು ಈಗ ನಮಗಿರುವ ತೊಂದರೆ ಏನು ಮತ್ತು ಅದರಿಂದ ಆಗುವ ಪರಿಣಾಮವೇನು ಎಂದು ನೋಡಿ ನಮ್ಮ ಒಪ್ಪಿಗೆಯನ್ನು ಕೊಡಬೇಕಾಗಿದೆ. ಈಗ ಅನೇಕ ಮಾನ್ಯ ಸದಸ್ಯರು ಅಪ್ಪಣೆ ಕೊಡಿಸಿದ ಹಾಗೆ ಆಹಾರದ ವಿಷಯದಲ್ಲಿ ಜನರಿಗೆ ಕಷ್ಟವಿದೆ. ನಮ್ಮ ದೇಶದಲ್ಲಿ ಬೆಳೆಯುವ ಆಹಾರವನ್ನು ದೇಶದ ಎಲ್ಲಾ ಜನರಿಗೂ ಹಂಚಬೇಕಾದುದೇನೋ ನಿಜ ವಾದ ಅಂಶ. ಆದರೆ ಈ ಸಂದರ್ಭದಲ್ಲಿ ಆಹಾರವನ್ನು ಬೆಳೆಯುವ ಜವಾಬ್ದಾರಿಯನ್ನು ಹಳ್ಳಿಗಳಲ್ಲಿರುವ ರೈತರ ಮೇಲೆ ಹಾಕುವುದು ಸರಿಯೇ ಎಂಬುದನ್ನು ನೋಡಬೇಕು. ಈಗ ನೀವು ದೇಶದಲ್ಲಿರುವ 18 ವರ್ಷದ ಮೇಲ್ಪಟ್ಟವರೆಲ್ಲರೂ ದಿವಸಕ್ಕೆ ಇಷ್ಟು ಗಂಟೆ ಕೆಲಸ ಮಾಡಬೇಕೆಂದು ಒಂದು ನಿಯಮವನ್ನು ಕಾನೂನು ಮೂಲಕ ಮಾಡಿಲ್ಲ. ಹೀಗಿರುವಾಗ ಹಳ್ಳಿಗಾಡಿನಲ್ಲಿ ಹೊಟ್ಟೆಗೆ ಮತ್ತು ಬಟ್ಟೆಗೆ ಇಲ್ಲದೆ ಹೆಂಗಸರು ಮಕ್ಕಳು ಮುದುಕಿಯರು ಹುಡುಗರು ಕಷ್ಟಪಟ್ಟು ವ್ಯವಸಾಯಮಾಡಿ ಸ್ವಲ್ಪ ದವಸ ಧಾನ್ಯಗಳನ್ನು ಇಟ್ಟುಕೊಂಡಿದ್ದರೆ ಅದನ್ನು ನಿಮ್ಮ ಹತೋಟಿ ಆಜ್ಞೆಯ ಮೇರೆಗೆ ನೀವು ಹೋಗಿ ದೋಚಿಕೊಂಡು ಬರುತ್ತೀರಾ. ಇಷ್ಟೇ ನೀವು ಮಾಡಿರುವ ಕಾನೂನು. ದೇಶದಲ್ಲಿ ದವಸ ಬೆಳೆದಿರುವ ಅವರು ಬೆಳೆಯದೆ ಇರುವವರಿಗೆ ಕೊಡಬೇಕಾದ್ದು ರೈತರ ಧರ್ಮ. ಆದರೆ ಹೀಗೆ ರೈತರಿಂದ ಬಲವಂತವಾಗಿ ತೆಗೆದುಕೊಳ್ಳುವುದು ಸರಿಯೇ ಎಂಬುದನ್ನು ನಾವು ನೋಡಬೇಕು. ಈಗ ಸರ್ಕಾರದವರು ಅವರಿಂದ ಯಾವ ರೀತಿ ದವಸವನ್ನು ತೆಗೆದುಕೊಳ್ಳುತ್ತಾರೆ ಎಂಬುದನ್ನು ನೋಡಬೇಕು. ರೈತರಿಗೆ ಅವರಿಂದ ತೆಗೆದುಕೊಂಡ ದವಸಕ್ಕೆ ಹಣವನ್ನು ಕೊಡುವಾಗ ಹೊರಗಡೆ ಅದಕ್ಕೆ ಕೊಡುವ ಬೆಲೆ, ರೈತರ ಸಾಲ ಎಷ್ಟಿದೆ ಮುಂತಾದ ಅಂಶಗಳನ್ನು ಗಮನಿಸಬೇಕು. ಈಗ ಇವುಗಳನ್ನು ಪರಿಶೀಲನೆಮಾಡಿ ಧಾರಣೆ ನಿಗದಿ ಮಾಡುತ್ತಿಲ್ಲ; ನಮ್ಮ ಅಕ್ಕಪಕ್ಕದಲ್ಲಿರುವ ಮದ್ರಾಸಿನಲ್ಲಿ ಪಲ್ಲಕ್ಕೆ 28 ರೂಪಾಯಿ ಕೊಟ್ಟರೂ ಸಹ ಇಲ್ಲಿ ಒಂದು ಪಲ್ಲಕ್ಕೆ 19$^1/_2$ ರೂಪಾಯಿ ಕೊಡುತ್ತಿದ್ದಾರೆ. ಇವುಗಳನ್ನು ಸರಿಯಾಗಿ ಪರಿಶೀಲನೆಮಾಡದೆ ಸುಮ್ಮನೆ ಒಂದು ಹುಕುಂ ಮಾಡಿಬಿಡುತ್ತಾರೆ. ಹೀಗೆ ಮಾಡುವುದು ಎಷ್ಟುಮಟ್ಟಿಗೆ ಸಮಂಜಸವಾದುದು ಎಂದು ತಾವು ಯೋಚನೆ ಮಾಡಬೇಕು.

ಈಗ ದೇಶದಲ್ಲಿ ಆಹಾರದ ಕೊರತೆ ವಿಷಯ ನೋಡೋಣ. ಯುದ್ಧವು ಪ್ರಾರಂಭವಾದ ಲಾಗಾಯ್ತು ಆಹಾರದ ಕೊರತೆಯು ಜಾಸ್ತಿಯಾಗಿದೆ. ಯುದ್ಧವು 1939ನೆಯ ಇಸವಿಯಲ್ಲಿ ಪ್ರಾರಂಭವಾಯ್ತು. ಅಂದರೆ ಈಗ ಅದು ಪ್ರಾರಂಭವಾಗಿ 8 ವರ್ಷಗಳಾದವು. ನಿಜವಾಗಿಯೂ ಸರ್ಕಾರದವರು ಮನಸ್ಸು ಮಾಡಿದ್ದರೆ ಹೆಚ್ಚಾಗಿ ದವಸ ಬೆಳೆದು ಈಗಿರುವ ಭಯವನ್ನು ತಪ್ಪಿಸಬಹುದಾಗಿತ್ತು. ಹಾಗೆ ಮಾಡಿದ್ದರೆ ಈ ಹತೋಟಿಯ ಅವಶ್ಯಕತೆಯು ಇರುತ್ತಿರಲಿಲ್ಲ ಮತ್ತು ಹೊರಗಡೆಯವರ ಸಹಾಯ ಕೇಳುವ ಅವಶ್ಯಕತೆಯೂ ಇರುತ್ತಿರಲಿಲ್ಲ. ಈಗ ಹೊರಗಡೆಯಿಂದ ಆಹಾರ ಪದಾರ್ಥಗಳನ್ನು ತರಿಸಲು ಸರ್ಕಾರದವರು ಕೋಟ್ಯಾಂತರ ರೂಪಾಯಿಗಳನ್ನು ಸಬ್‌ಸಿಡೈಸ್ ಮಾಡಿದ್ದಾರೆ. ಆದರೆ ಶ್ರೀಮಾನ್ಯ ಹಾರಾಜರವರ ಸತ್ಪ್ರಗಳಾದ ಬಡರೈತರು ಕಷ್ಟಪಟ್ಟು ಕೆಲಸಮಾಡಿ ದವಸ ಬೆಳೆದರೆ ಅವರಿಗೆ ಪಲ್ಲಾ ಒಂದಕ್ಕೆ 5 ರೂಪಾಯಿ ಬೋನಸ್ ಕೊಡಿ ಎಂದು ಕೇಳಿದರೆ

ಅದನ್ನು ಕೊಡಲಿಲ್ಲ. ಇಂಡಿಯಾ ಸರ್ಕಾರದವರು ಕೊಟ್ಟರೆ ನಾವು ಕೊಡುತ್ತೇವೆ ಎಂದು ಹೇಳುತ್ತೀರಿ. ಇತರ ಯಾವ ಬಾಬಿಗೆ ಎಷ್ಟು ಬೇಕಾದರೂ ಖರ್ಚು ಮಾಡುತ್ತೀರಿ, ರೈತರಿಗೆ ಕೊಡಿ ಎಂದರೆ ಕೊಡುವುದಿಲ್ಲ. ಅವರಿಗೆ ಪಲ್ಲಾಕ್ಕೆ 8 ಅಣೆ ಕೊಡುವುದು ನ್ಯಾಯವಾಗಿದೆಯೇ ಎಂದು ನೋಡಬೇಕು. ಇದನ್ನು ನಾವೆಲ್ಲರೂ ಯೋಚನೆ ಮಾಡಬೇಕು. ರೈತರು ಹೆಚ್ಚಾಗಿ ಆಹಾರ ಪದಾರ್ಥ ಬೆಳೆಯಲು ಅವರಿಗೆ ಸರಿಯಾದ ಪ್ರೋತ್ಸಾಹ ಕೊಡಬೇಕು. ಹಾಗೆ ಮಾಡದೆ ಸುಮ್ಮನೆ ಹತೋಟಿ ಆಜ್ಞೆಯನ್ನು ಜಾರಿಗೆ ತರುವುದರಿಂದ ಅವರಿಗೆ ಪ್ರಯೋಜನವಾಗುವುದಿಲ್ಲ. ಹಾಗೆ ಮಾಡುವುದರಿಂದ 10 ಎಕರೆ ವ್ಯವಸಾಯ ಮಾಡತಕ್ಕವರು 2 ಎಕರೆ ಮಾತ್ರ ವ್ಯವಸಾಯಮಾಡುತ್ತಾರೆ. ಈಗ 50 ವರ್ಷದಿಂದ ನಮ್ಮ ಸಂಸ್ಥಾನದಲ್ಲಿರುವ ಪ್ರಜಾಸಂಖ್ಯೆ ಎಷ್ಟಿದೆ, ಸಂಸ್ಥಾನದಲ್ಲಿ ಉತ್ಪತ್ತಿಯಾಗುತ್ತಿರುವ ದವಸ ಎಷ್ಟು, ಅದು ಸಾಕಾಗುತ್ತದೆಯೇ, ಎಂಬ ಒಂದು ಲೆಖ್ಖವನ್ನು ಮಾಡಿ ನೋಡಿ ಆಹಾರ ಸಾಲದೆ ಬಂದರೆ ಅದನ್ನು ಹೆಚ್ಚಿಸಲು ಪ್ರಯತ್ನ ಮಾಡಬೇಕು. ಹೆಚ್ಚಿಗೆ ಆಹಾರ ಪದಾರ್ಥಗಳನ್ನು ಬೆಳೆಯಲು ಒಂದು ಯೋಜನೆಯನ್ನು ಮಾಡಿದ್ದರೂ ಸಹ ಈ ವಿಷಯದಲ್ಲಿ ಸರ್ಕಾರದವರು ಮುಂದಕ್ಕೆ ಹೋಗದೆ ಹಿಂದಕ್ಕೆ ಹೋಗುತ್ತಿದ್ದಾರೆ. ಇದನ್ನು ಸರಿಯಾಗಿ ತಿಳಿಸಬೇಕಾದರೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ಈಗ ಸರ್ಕಾರದವರು ಬೆಲ್ಲದ ಹತೋಟಿ ವಿಷಯದಲ್ಲಿ ಒಂದು ಹತೋಟಿ ಹುಕುಂ ಜಾರಿಗೆ ತಂದಿದ್ದಾರೆ. ಈ ವಿಷಯವಾಗಿ ಹೋದ ಅಧಿವೇಶನದಲ್ಲಿ ಒಂದು ನಿಲುವಳಿಸೂಚನೆ ಸಹ ಚರ್ಚೆಗೆ ಬಂದಿತ್ತು. ಈ ರೀತಿ ಒಂದು ಹತೋಟಿ ಆಜ್ಞೆಯನ್ನು ಜಾರಿ ಮಾಡಿದ ಮೇಲೆ ಅದನ್ನು ಸರಿಯಾಗಿ ಒದಗಿಸಬೇಕಾದ್ದು ಸರ್ಕಾರದವರ ಜವಾಬ್ದಾರಿ ಹೌದೋ ಅಲ್ಲವೋ ಎಂದು ನಾವು ನೋಡಬೇಕು. ಈಗ ಈ ಆಜ್ಞೆಯು ಜಾರಿಯಾದ ಮೇಲೆ ಏನಾಗಿದೆ ಎಂದರೆ ಕೆಲವು ಕಡೆ ಬೆಲ್ಲವಿದೆ, ಕೆಲವು ಕಡೆ ಬೆಲ್ಲವಿಲ್ಲ, ಅದು ಹೆಚ್ಚಾಗಿರುವ ಕಡೆಯಿಂದ ಕಡಿಮೆಯಾಗಿರುವ ಕಡೆಗೆ ತೆಗೆದುಕೊಂಡ ಹೋಗಲು ಅವಕಾಶವಿಲ್ಲ. ನನಗೆ ತಿಳಿದ ಹಾಗೆ ನಮ್ಮ ಡಿಪೋಗಳಲ್ಲಿ ಬೆಲ್ಲವಿಲ್ಲ. ಆದರೆ ಮಂಡ್ಯ ಡಿಸ್ಟ್ರಿಕ್ಟಿನ ಕೆಲವು ತಾಲ್ಲೂಕುಗಳಲ್ಲಿ ಅದರ ದಾಸ್ತಾನಿದೆ. ಸರ್ಕಾರದವರಿಗೆ ಇದರ ಹಂಚಿಕೆ ಏರ್ಪಾಡನ್ನು ಸರಿಯಾಗಿ ಮಾಡಲು ಆಗದಿದ್ದರೆ ಹತೋಟಿ ಆಜ್ಞೆಯನ್ನು ಸಡಿಲಮಾಡಲು ಸಹ ಏರ್ಪಾಡು ಮಾಡುವುದಿಲ್ಲ. ಹಾಗೆ ಮಾಡಿದರೆ ತಮ್ಮ ಮೇಲೆ ಏನು ಅಪವಾದ ಬರುತ್ತದೆಯೋ ಏನೋ ಎಂದು ಹಾಗೆ ಮಾಡುವುದಿಲ್ಲ. ಒಂದು ಕಡೆ ಬೆಲ್ಲವಿಲ್ಲವೆಂದು ತೊಂದರೆಯ ದೂರು ಬಂದ ತಕ್ಷಣ ಹೆಚ್ಚಾಗಿರುವ ಕಡೆಗಳಿಂದ ಅಲ್ಲಿಗೆ ಕಳುಹಿಸುವ ಏರ್ಪಾಡು ಮಾಡಬೇಕು. ಎಲ್ಲರಿಗೂ ಗೊತ್ತಿರುವ ಹಾಗೆ ಬೆಲ್ಲವನ್ನು ಹೆಚ್ಚು ಬೆಲ್ಲವನ್ನು ಹೆಚ್ಚು ದಿವಸ ಶೇಕರಿಸಿ ಇಡಲು ಸಾಧ್ಯವಿಲ್ಲ. ಶೇಕರಿಸಿಟ್ಟರೆ ಅದು ಹಾಳಾಗುವುದಲ್ಲದೆ ಆ ಜಾಗದಲ್ಲಿ ವಾಸಮಾಡಲು ಅನಾರೋಗ್ಯವಾಗುತ್ತದೆ. ಆದುದರಿಂದ ಬೆಲ್ಲವನ್ನು ಶೇಕರಿಸಿಡುವುದರಿಂದ ತೊಂದರೆಯಾಗುತ್ತದೆ. ಈ ಸಂದರ್ಭದಲ್ಲಿ ಇದರ ವಿಷಯ ಇಷ್ಟು ಹೇಳಬೇಕಾಯಿತು.

ಇದೇ ರೀತಿ ಬಟ್ಟೆಯ ವಿಷಯದಲ್ಲಿಯೂ ಹತೋಟಿ ಮಾಡಿದ್ದಾರೆ. ಇದು ಎಷ್ಟು ಮಾತ್ರ ಸಮರ್ಪಕವಾಗಿದೆ ಮತ್ತು ಪ್ರಜೆಗಳಿಗೆ ಅನುಕೂಲವಾಗುತ್ತದೆ ಎಂಬುದನ್ನು ನೋಡಬೇಕು. ನನಗೆ

ಗೊತ್ತಿರುವ ಹಾಗೆ ಮದ್ದೂರು ತಾಲ್ಲೂಕಿನಲ್ಲಿ ಎರಡು ಸ್ಥಳಗಳಲ್ಲಿ ಜವಳಿ ಮಾರಾಟವಾಗುತ್ತಿದೆ. ಅದು ಯಾವುದೆಂದರೆ ನಿಡಘಟ್ಟ ಮತ್ತು ಮದ್ದೂರು. ನಿಡಘಟ್ಟದಿಂದ ಮದ್ದೂರಿಗೆ 4 ಮೈಲಿ ಫಾಸಲೆಯಿದೆ. ಮದ್ದೂರಿನಲ್ಲಿ 18 ಜನರಿಗೆ ಮತ್ತು ನಿಡಘಟ್ಟದಲ್ಲಿ 24 ಜನರಿಗೆ ಬಟ್ಟೆ ಹಂಚಿಕೆ ಆಗುತ್ತಿದೆ. ಈ ರೀತಿ ಹಂಚಿಕೆಯಲ್ಲಿ ಅರ್ಥವಿದೆಯೇ? ಬಟ್ಟೆಯನ್ನು ಕೊಂಡುಕೊಳ್ಳುವ ವಿಚಾರದಲ್ಲಿ ಜನರಿಗೆ ಹೀಗೆ ತೊಂದರೆಯಿದ್ದರೆ ಅದರಿಂದ ದೇಶಕ್ಕೆ ಕ್ಷೇಮವೇ ಮತ್ತು ಜನರಿಗೆ ಶಾಂತಿ ಮತ್ತು ಸಮಾಧಾನವಾಗುತ್ತದೆಯೇ ಎಂಬುದನ್ನು ನೋಡಬೇಕು. ಹತೋಟಿ ಆಜ್ಞೆಗಳನ್ನು ಜಾರಿ ಮಾಡುವ ಉದ್ದೇಶವೇನೆಂದರೆ ಅದರಿಂದ ಜನಗಳಿಗೆ ಅನುಕೂಲವಾಗಲಿ ಎಂದು ನಾನು ತಿಳಿದುಕೊಂಡಿದ್ದೇನೆ. ಆದರೆ ಈಗಿನ ಕಾಲದಲ್ಲಿ ಅದರಿಂದ ಜನರಿಗೆ ಎಷ್ಟುಮಟ್ಟಿಗೆ ತೊಂದರೆಯಾಗುತ್ತಿದೆ ಎಂಬುದನ್ನು ನಾವು ನೋಡಿದ್ದೇವೆ. ಮತ್ತು ಅನುಭವಿಸುತ್ತಲಿದ್ದೇವೆ. ಹೀಗೆ ತೊಂದರೆ ಮತ್ತು ಅನಾನುಕೂಲವಾಗಿರುವ ಹತೋಟಿ ಆಜ್ಞೆಗಳು ಏಕೆ ಇರಬೇಕು?

ನಾನು ಈ ಸಭೆಯ ಕಾಲವನ್ನು ಇನ್ನು ಹೆಚ್ಚುಕಾಲ ತೆಗೆದುಕೊಳ್ಳದೆ ತಿಳಿಸುವುದೇನೆಂದರೆ ದೇಶದ ಹಿತದೃಷ್ಟಿಯಿಂದ ಮತ್ತು ಆಡಳಿತವನ್ನು ಸರಿಯಾಗಿ ನಡೆಸುವುದಕ್ಕೆ ಯಾವದಾದರೂ ಒಂದು ಕಾನೂನು ಬೇಕಾದರೆ ಅದನ್ನು ಈಗಿನ ಸನ್ನಿವೇಶಕ್ಕೆ ತಕ್ಕಂತೆ ರಚಿಸಿ ಅದರಲ್ಲಿ ಅಡಕವಾಗಿರುವ ಅಂಶಗಳನ್ನು ತಪಶೀಲರಾಗಿ ಪರಿಷ್ಕಾರ ಮಾಡಿದರೆ ಆಗ ನಾವು ಅದಕ್ಕೆ ನಮ್ಮ ಒಪ್ಪಿಗೆಯನ್ನು ಕೊಡಬಹುದು. ಹಾಗೆ ಮಾಡದೆ ಈಗಿರುವ ರೀತಿಯಲ್ಲಿ ಮಸೂದಾ ಕಾನೂನನ್ನು ತಂದರೆ ಅದಕ್ಕೆ ನಮ್ಮ ಒಪ್ಪಿಗೆಯನ್ನು ಕಾನೂನನ್ನು ತಂದರೆ ಅದಕ್ಕೆ ನಮ್ಮ ಒಪ್ಪಿಗೆಯನ್ನು ಕೊಡುವುದಕ್ಕೆ ಸಾಧ್ಯವಿಲ್ಲ. ಆದುದರಿಂದ ದಯೆಯಿಟ್ಟು ಎಲ್ಲಾ ವಿಷಯಗಳನ್ನೂ ಪರಿಶೀಲನೆಮಾಡಿ ಈ ಮಸೂದಾ ಕಾನೂನನ್ನು ವಾಪಸು ತೆಗೆದುಕೊಳ್ಳಬೇಕೆಂದು ವಿನಯದಿಂದ ಸೂಚಿಸುತ್ತೇನೆ.



**ಬೆಂಕಿ ಕಡ್ಡಿಯಂತಹ ಸಣ್ಣ ವಸ್ತು ಆದರೆ ಅಗತ್ಯ ವಸ್ತುವಿನ ಕಡೆಗೂ ಮಲ್ಲಯ್ಯನವರು ಆದೆಷ್ಟು ಗಮನ ಹರಿಸುತ್ತಿದ್ದರೆಂಬುದಕ್ಕೆ ಈ ಸಭಾಭಾಷಣವೊಂದು ಸಾಕ್ಷಿ. ಬೆಂಕಿಕಡ್ಡಿ ಮೇಲಿನ ಎಕ್ಸೈಜ್ ಸುಂಕದ ವಿಚಾರಕ್ಕೆ ತಿದ್ದುಪಡಿ ತರುವ ಗಮನ ಮಸೂದಾ ಕಾನೂನು 27.5.1948ರಂದು ಸದನದಲ್ಲಿ ಪ್ರಸ್ತಾಪಗೊಂಡಿತು.**

## ಬೆಂಕಿಕಡ್ಡಿ ತೆರಿಗೆ

ಮಾನ್ಯ ಸಚಿವರು ಈಗ ತಾನೆ ಕೊಟ್ಟ ವಿವರಣೆಯಲ್ಲಿ ಉತ್ಪತ್ತಿ ಬರತಕ್ಕದ್ದಾದರೂ ಅಂದಾಜುಮಾಡಿರುವ ಪ್ರಕಾರ ಬಹಳ ಸ್ವಲ್ಪ ಇದೆ. $7^1/_2$ ಲಕ್ಷ ರೂಪಾಯಿ ಈಗ ಬರುತ್ತಿರುವುದು. ಮುಂದೆ ಬದಲಾವಣೆಯಂತೆ ನಿರೀಕ್ಷಣೆಯಿರುವುದು. 8 ಲಕ್ಷ ಅಂದರೆ 50 ಸಾವಿರ ರೂಪಾಯಿಗಳು ಮಾತ್ರ. ಈಗ ಒಂದು ದೃಷ್ಟಿಯಿಂದ ನಾನು ಇದನ್ನು ನೋಡುತ್ತೇನೆ. ಏನೆಂದರೆ, ಜನಸಾಮಾನ್ಯರ ಹಿತದೃಷ್ಟಿಯಿಂದ ಬೆಂಕಿಕಡ್ಡಿ ಅನೇಕರಿಗೆ ಎಷ್ಟು ಮುಖ್ಯವಾದ ವಸ್ತು!! ಅದರ ಬೆಲೆ ಜನಸಾಮಾನ್ಯರ ಮೇಲೆ ಎಷ್ಟು ಪರಿಣಾಮಕಾರಿಯಾದ ರೀತಿಯಲ್ಲಿದೆ ಎನ್ನುವ ದೃಷ್ಟಿಯಿಂದ ನಾನು ಈ ಬದಲಾವಣೆಯನ್ನು ವಿರೋಧಮಾಡಬೇಕಾಗಿದೆ. ಈಗ ಸರ್ಕಾರದವರು ಒಂದು ಹೊಸ ತೆರಿಗೆ ಹಾಕಿರುವುದರ ಉದ್ದೇಶ, ಸರ್ಕಾರದ ಆಡಳಿತ ನಡೆಯಬೇಕಾದರೆ ಮತ್ತು ಜನಸಾಮಾನ್ಯರ ಹಿತಕ್ಕೆ ಬೇಕಾದ ನಾನಾ ಕಾರ್ಯಕಲಾಪಗಳನ್ನು ಮಾಡಬೇಕಾದರೆ ಹೊಸ ತೆರಿಗೆ ಕೊಡಬೇಕು. ಇಲ್ಲದಿದ್ದರೆ ಉತ್ಪತ್ತಿ ಜಾಸ್ತಿಯಾಗುವುದಿಲ್ಲ ಎಂಬುದು. ಉತ್ಪತ್ತಿ ಸರಿಯಾಗಿಲ್ಲದಿದ್ದ ಪಕ್ಷದಲ್ಲಿ ಸರ್ಕಾರ ಯಾವುದು ಒಳ್ಳೆಯ ಕೆಲಸಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಒಳ್ಳೆಯ ಕೆಲಸಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಇದನ್ನು ಸಂಪೂರ್ಣವಾಗಿ ನಾನು ಒಪ್ಪುತ್ತೇನೆ. ಆದರೆ ಈಗ ಉತ್ತರ ಕೊಟ್ಟ ರೀತಿಯಲ್ಲಿ ಉತ್ಪತ್ತಿ ಕೂಡ ನಮಗೆ ಏನೂ ಜಾಸ್ತಿಯಿಲ್ಲ. ಸುಮಾರು 50 ಸಾವಿರ ರೂಪಾಯಿಗಳು ಮಾತ್ರ. ಅದೂ

ಅಂದಾಜು ನಿರೀಕ್ಷಣೆ. ಈ 50 ಸಾವಿರ ರೂಪಾಯಿಗಳ ಉತ್ಪತ್ತಿಗಾಗಿ ಬದಲಾವಣೆಮಾಡುವುದರಿಂದ ಜನಸಾಮಾನ್ಯರಿಗೆ ಹೆಚ್ಚು ಕಷ್ಟವಾಗುತ್ತದೆ ಮತ್ತು ಹೆಚ್ಚಿಗೆ 50 ಸಾವಿರ ರೂಪಾಯಿಗಳು ಸರ್ಕಾರದವರಿಗೆ ಬರುವ ಈ ಸಂದರ್ಭದಲ್ಲಿ ಜನಸಾಮಾನ್ಯರ ತಲೆ ಮೇಲೆ ಅನೇಕ ಲಕ್ಷರೂಪಾಯಿಗಳ ಅಪರೋಕ್ಷ ತೆರಿಗೆ (indirect taxation) ಬೀಳುತ್ತದೆ. ಮಾರಾಟಮಾಡತಕ್ಕವರು ತಯಾರುಮಾಡುವುದಿಲ್ಲ. ಅಂದರೆ ಚಿಲ್ಲರೆಯಾಗಿ ಮಾರುವ ಮಧ್ಯಸ್ಥರಿಂದ ದಿನವಹಿ ಜನಸಾಮಾನ್ಯರು ಬೆಂಕಿಪೊಟ್ಟಣ ಪಡೆಯಬೇಕಾದ ಸಂದರ್ಭದಲ್ಲಿ ಒಂದು ಬೆಂಕಿಪಟ್ಟಣಕ್ಕೆ ಒಂದಾಣೆ, ಒಂದೂಕಾಲಾಣೆ, $1^1/_2$ ಅಣೆ, 4 ದುಡ್ಡು ಹೀಗೆಲ್ಲಾ ತರಬೇಕಾಗುತ್ತದೆ. ಬೆಂಕಿಪಟ್ಟಣ ಹೆಚ್ಚಾಗಿದ್ದ ಊರುಗಳಲ್ಲಿ ಸ್ವಲ್ಪ ಕಡಿಮೆ ಬೆಲೆಗೆ ಸಿಗುತ್ತದೆ. ಕಡಿಮೆಯಿದ್ದರೆ ಒಂದಕ್ಕೆ ಎರಡರಷ್ಟು ಒಂದೂವರೆಯಷ್ಟು ಜನರಿಂದ ವಸೂಲಾಗುತ್ತದೆ. ಇದರಿಂದ ಜನರಿಗೆ ಎಷ್ಟು ತೊಂದರೆಯುಂಟಾಗುತ್ತದೆಂಬುದನ್ನು ಪರ್ಯಾಲೋಚಿಸಬೇಕು. ಈಗ ಇದರಲ್ಲಿ ಬೇಕಾದಷ್ಟು ಲಕ್ಷಾಂತರ ರೂಪಾಯಿಗಳ ಹೆಚ್ಚು ವರಮಾನಬರತಕ್ಕ ಸಂಭವವಿದ್ದರೆ 50 ಲಕ್ಷ ಅಥವಾ 40 ಲಕ್ಷ ಬರುವುದಾದರೆ ಒಂದು ವೇಳೆ ಇದನ್ನು ಬಿಟ್ಟರೆ ಸರ್ಕಾರದ ಆಯವ್ಯಯದ ಪಟ್ಟಿ ತಲೆಕೆಳಗಾಗಬಹುದು ಮತ್ತು ಜನಸಾಮಾನ್ಯರ ಹಿತದೃಷ್ಟಿಯಲ್ಲಿ ಸರ್ಕಾರದವರು ಮಾಡಬೇಕೆಂದಿರುವ ಕೆಲಸಕಾರ್ಯಗಳಿಗೆ ತೊಂದರೆ ಬರಬಹುದು; ಆದ್ದರಿಂದ ಇದನ್ನು ಅನುಮೋದಿಸೋಣ ಎಂದು ಶಂಕೆ, ಭೀತಿ ಇದರಿಂದ ಬರುವುದಿಲ್ಲ. ಈಗ ಮಾನ್ಯ ಸಚಿವರು ಅಪ್ಪಣೆ ಕೊಟ್ಟ ರೀತಿಯಲ್ಲಿ ಬಹಳ ಸ್ವಲ್ಪವಾಗಿ ಬರತಕ್ಕದ್ದು; ಅದೂ 50 ಸಾವಿರ ರೂಪಾಯಿ ಮಾತ್ರ. 10 ಕೋಟಿಯಿಂದ 12–13 ಕೋಟಿ ರೂಪಾಯಿಗಳ ವರೆಗೆ ಖರ್ಚಾಗತಕ್ಕ ಮುಂದಿನ ವರ್ಷದ ಬಡ್ಜೆಟ್ಟಿಗೂ ಈ 50 ಸಾವಿರ ರೂಪಾಯಿಗೂ ಯಾವ ಸಂಬಂಧವೂ ಇಲ್ಲ. ಆದರೆ ಮೊದಲೇ ಹೇಳಿದ ಹಾಗೆ ಇದರಿಂದ ಜನ ಸಾಮಾನ್ಯರಿಗೆ ಆಗತಕ್ಕ ಪರಿಣಾಮ ವಿಶೇಷವಾಗುತ್ತದೆ ಆ ದೃಷ್ಟಿಯಿಂದ ದಯವಿಟ್ಟು ಸರ್ಕಾರದವರು ಈ ಬದಲಾವಣೆಯನ್ನು ಮಾಡಬಾರದೆಂದು ಕೇಳಿಕೊಂಡು ಈ ಬಿಲ್ಲನ್ನು ವಿರೋಧಿಸುತ್ತೇನೆ.



**ಮೈಸೂರು ಸಂಸ್ಥಾನದಲ್ಲಿ ಸಾರ್ವಜನಿಕರ ನೆಮ್ಮದಿಯನ್ನು ಕಾಪಾಡುವುದಕ್ಕೆ ಸಂಬಂಧಪಟ್ಟ ಮಸೂದಾ ಕಾನೂನನ್ನು ಮಲ್ಲಯ್ಯನವರು 31.5.1948ರಂದು ಪರ್ಯಾಲೋಚಿಸಿದರು. ಮೈಸೂರು ರಾಜ್ಯದಲ್ಲಿ ಅಂಥ ಉಗ್ರ ಸ್ವರೂಪದ ಕಾನೂನು ಮತ್ತು ಸುವ್ಯವಸ್ಥೆಯು ಸಂಭವಿಸಿರದಿದ್ದರೂ ಇಂಥ ಒಂದು ಮಸೂದಾ ಕಾನೂನು ಮಂಡನೆಯಾಗುವುದೆ ಬಹಳ ಮುಖ್ಯ ಪ್ರಸಂಗ.**

**ಈ ಕಾನೂನು ಮರಣದಂಡನೆ ವಿಧಿಸುತ್ತದೆ !**

ಅಧ್ಯಕ್ಷರೇ, ಈ ಮಸೂದಾ ಕಾನೂನನ್ನು ಮಂತ್ರಿಗಳು ನಮ್ಮ ಮುಂದಿಡತಕ್ಕ ಸಂದರ್ಭದಲ್ಲಿ ಈ ತೆರದ ಒಂದು ವಿಷಯ ಯಾವ ಪ್ರಜಾ ಸ್ವಾತಂತ್ರ ಎಲ್ಲಕ್ಕಿಂತಲೂ ಶ್ರೇಷ್ಠವಾದುದೋ ಮತ್ತು ಅದೂ ಕೂಡ ಪ್ರಪಂಚದಲ್ಲಿ ನಡೆದ ಎರಡನೆಯ ಮಹಾಯುದ್ಧದ ಪರಿಣಾಮವಾಗಿ ಉದ್ಭವವಾದಂಥ ಅಟ್ಲಾಂಟಿಕ್ ಚಾರ್ಟರಿನಲ್ಲಿ ಘೋಷಿಸಲ್ಪಟ್ಟಂಥಾ ನಾಲ್ಕು ಸ್ವಾತಂತ್ರ್ಯಗಳನ್ನೇ ಮೊಟಕು ಮಾಡುವುದಕ್ಕೆ ತರತಕ್ಕದ್ದೊ ಅಂಥಾ ಈ ಮಸೂದಾ ಕಾನೂನಿನ ಅವಶ್ಯಕತೆ ಮೈಸೂರು ದೇಶದಲ್ಲಿ ಎಷ್ಟು ಮಟ್ಟಿಗಿತ್ತೆಂಬುದನ್ನು ಮಂತ್ರಿಗಳು ಹೇಳುತ್ತಾರೆಂದು ನಾನು ಬಹಳ ಕುತೂಹಲದಿಂದ ಕೇಳಿದೆ. ಆದರೆ ನನ್ನ ಮನಸ್ಸಿಗೆ ಅವರು ಇಟ್ಟಂಥ ವಾದದಲ್ಲಿ ಯಾವುದೂ ಕೂಡ ಪರಿಣಾಮಕಾರಿಯಾಗಿ ಹೊಳೆಯಲಿಲ್ಲ. ಮುಖ್ಯವಾಗಿ ಏನಿದ್ದರೂ ಕೂಡ ಇಂಡಿಯಾ ದೇಶದ ಇತರ ಪ್ರಾಂತಗಳಲ್ಲಿ ವಿಭಾಗವಾದ ಸಂದರ್ಭದಲ್ಲಿ ಗಲಭೆಯಾಯಿತು. ಆ ಸಂದರ್ಭದಲ್ಲಿ ಮತ್ತು ಎಲ್ಲಕ್ಕಿಂತಲೂ ಹೆಚ್ಚಾಗಿ ದೇಶದ ತಂದೆಯಾದ ಮಹಾತ್ಮಾಗಾಂಧಿಯವರ ಕೊಲೆಯ ವಿಷಯವಾಗಿ ನಡೆದಂಥ ಘಟನೆಗಳಿಂದ ಇದನ್ನು ತಂದಿದ್ದಾಗಿದೆಯೆಂದು ಹೇಳಿದರು. ಆದರೆ ಮೈಸೂರು ದೇಶದಲ್ಲಿ ಅಂಥ ದುರ್ಘಟನೆಗಳು ಯಾವುದೂ ಇದುವರೆಗೂ ನಡೆಯಲಿಲ್ಲ. ಮುಂದಾದರೂ ಕೂಡ ಪ್ರಜಾರಕ್ಷಣೆಯೇ ಸರ್ಕಾರಕ್ಕೆ ಅಸಾಧ್ಯವಾಗುತ್ತಿದೆಯೆನ್ನುವಂಥ ಯಾವ ಸನ್ನಿವೇಶದ ಸೂಚನೆಗಳು ಕೂಡ ನನಗೆ ಕಾಣಬರುವುದಿಲ್ಲ. ಅಂಥಾದ್ದರಲ್ಲಿ ಈ ತೆರದ ವಿಶೇಷ ಕಾನೂನನ್ನು ತಂದು ಜನಗಳಲ್ಲಿ ಸ್ವಾತಂತ್ರ್ಯಕ್ಕೆ ಅಡ್ಡಿ ಆತಂಕಗಳನ್ನು ತರುವುದಕ್ಕೆ ಬದಲಾಗಿ ಈಗಿರುವ ಕಾನೂನುಗಳಿಂದಲೇ ಇಲ್ಲಿ ಯಾವ ಯಾವ ಉದ್ದೇಶಗಳನ್ನು ತಡೆಗಟ್ಟಬೇಕೆಂದು ಹೇಳಿದ್ದಾರೋ ಅವನ್ನೆಲ್ಲಾ ತಡೆಗಟ್ಟುವುದಕ್ಕೆ ಸಾಧ್ಯವಿರಲಿಲ್ಲವೇ

ಎನ್ನುವ ವಿಷಯವನ್ನೂ ಕೂಡ ಅವರು ಹೇಳಲಿಲ್ಲ. ಇವುಗಳಾವುವೂ ಇಲ್ಲದೆಯೇ ಮೈಸೂರು ದೇಶದ ಪರಿಸ್ಥಿತಿಯನ್ನು ಈಗಿರತಕ್ಕ ಕಾನೂನುಗಳ ಬಲದಿಂದಲೇ ದೇಶದ ನೆಮ್ಮದಿಯನ್ನು ಶಾಂತಿಯನ್ನೂ ಕಾಪಾಡುವುದಕ್ಕೆ ಸಾಧ್ಯವಿದೆಯೆಂದು ನಾನು ಖಂಡಿತವಾಗಿ ಹೇಳಬಲ್ಲೆ.

ಇನ್ನು ಕೆಲವು ಎಲ್ಲಕ್ಕಿಂತಲೂ ಹೆಚ್ಚಾಗಿ ಆಕ್ಷೇಪಣೀಯವಾದ ವಿಷಯಗಳಿವೆ. ಅದು ಮರಣದಂಡನೆಯನ್ನು ವಿಧಿಸತಕ್ಕ ವಿಷಯ. ಯಾವ ಯಾವ ಅಪರಾಧಗಳನ್ನು ಮಾಡಿದರೆ ಈಗಿನ ಕಾನೂನಿನ ಬಲದಿಂದ ಒಂದೆರಡು ವರ್ಷಗಳ ಶಿಕ್ಷೆ ಕೊಡುವುದಕ್ಕೆ ಅವಕಾಶವಿದೆಯೋ ಅಂಥಾದಕ್ಕೆ ಈ ಕಾನೂನಿನಲ್ಲಿ ಮರಣ ದಂಡನೆಯನ್ನೇ ವಿಧಿಸಿದ್ದಾರೆ.

ಇವತ್ತಿನ ದಿವಸ ಇಡೀ ಪ್ರಪಂಚದಲ್ಲೆಲ್ಲಾ ಪರಿಶೀಲನೆ ಮಾಡಿದರೆ ಅದರಲ್ಲೂ ಎಲ್ಲಿ ಇಡೀ ಪ್ರಪಂಚದಲ್ಲೇ ಒಬ್ಬರನ್ನೊಬ್ಬರು ಕೊಲ್ಲಬೇಕೆಂದು ಹೊರಟು ಲಕ್ಷಾಂತರ ಪ್ರಾಣಗಳನ್ನು ಹತ್ಯೆಮಾಡಿ ವಿಶೇಷ ದ್ರವ್ಯನಾಶ, ಕಷ್ಟನಷ್ಟಗಳಿಗೆ ಒಳಗಾಗುತ್ತಾ ಇರುವಾಗಲೂ ಕೂಡ ಮೊನ್ನೆ ತಾನೆ ಹೌಸ್ ಆಫ್ ಕಾಮನ್ಸ್‌ನಲ್ಲಿ ಮರಣದಂಡನೆಯನ್ನೇ ವಜಾಮಾಡಬೇಕೆಂಬ ತತ್ವವನ್ನು ಪ್ರತಿಪಾಲನೆ ಬೇಕಾದರೆ ಮೈಸೂರು ದೇಶದಲ್ಲಿ ಅದೂ ಇಂಡಿಯಾ ದೇಶಕ್ಕೆ ಸಾರಿ ಮಹಾತ್ಮಾ ಗಾಂಧಿ ಬಾಪೂಜಿಯವರ ಅನುಯಾಯಿಗಳೆಂದು ಹೇಳಿಕೊಳ್ಳುತ್ತಿರುವ ಕಾಂಗ್ರೆಸ್ ಮಂತ್ರಿಮಂಡಲದವರು ಈ ತೆರದ ಮರಣ ದಂಡನೆ ವಿಧಿಸತಕ್ಕ ವಿಶೇಷ ಅಧಿಕಾರವನ್ನೇ ಉಪಯೋಗಿಸತಕ್ಕ ಒಂದು ಕಾನೂನನ್ನೇ ತಂದಿರತಕ್ಕದ್ದು ನಿಜವಾಗಿಯೂ ಬಹಳ ಶೋಚನೀಯ ಸಂಗತಿಯೆಂದು ಬಹಳ ವ್ಯಸನದಿಂದ ಹೇಳಬೇಕಾಗಿದೆ.

ಯಾವಾಗಲೂ ನಾನು ಹಿಂದೆ ಸರ್ಕಾರದ ಪರವಾಗಿ ಈ ಸಭೆಯಲ್ಲಿ ಮಂಡಿಸಿದಂಥ ಕೆಲವು ಮಸೂದೆಗಳ ವಿಷಯವಾಗಿ ಹೇಳಿದ ಹಾಗೆ ಯಾವ ಒಳ್ಳೆಯ ಸರ್ಕಾರದ ಲಕ್ಷಣವಾದರೂ ಆದಷ್ಟು ಕಡಿಮೆ ಮಸೂದಾ ಕಾನೂನುಗಳಿಂದಲೇ ರಾಜ್ಯಭಾರವನ್ನು ನಡೆಸತಕ್ಕ ಪದ್ಧತಿ ಬರಬೇಕೆಂದು ನಾನು ಹೇಳಿದ್ದೇನೆ. ಸಾಧಾರಣ ಕಾರ್ಯಕಲಾಪಗಳಿಂದಲೇ ರಾಜ್ಯ ಭಾರ ನಡೆಸುವುದಕ್ಕೆ ಸಾಧ್ಯವಿರುವಾಗ ಇಂಥ ವಿಶೇಷ ಅಧಿಕಾರಗಳನ್ನು ಕೊಟ್ಟು ಇದನ್ನು ಇಡೀ ದೇಶದ ಬಹು ಭಾಗದ ಜನರ ಹಕ್ಕುಬಾಧ್ಯತೆಗಳಿಗೆ ಧಕ್ಕೆ ತರುವುದು ಸರ್ವಥಾ ನ್ಯಾಯವಿಲ್ಲ.

**ಅಧ್ಯಕ್ಷರೇ,** ಈ ಮಸೂದಾ ಕಾನೂನಿಗೆ ಬೆಂಬಲಕೊಟ್ಟ ಮಾನ್ಯ ಸ್ನೇಹಿತರು ಕೆಲವು ವಿಷಯಗಳನ್ನು ಹೇಳಿದರು. ಈ ತೆರದ ಮಸೂದಾ ಕಾನೂನುಗಳು ಹಿಂದೆ ಬಂದಂಥ ಕಾಲದಲ್ಲಿ ಇರುವ ಸನ್ನಿವೇಶ ಅದು. ಸರ್ಕಾರದವರು ತಮಗೆ ಕೊಟ್ಟ ಅಧಿಕಾರವನ್ನು ಸರಿಯಾಗಿ ಉಪಯೋಗಿಸದೇ ಹೋದರೆ ಆ ಸರ್ಕಾರವನ್ನು ಕೆಲಸದಿಂದ ತೆಗೆಯುವ ಅಧಿಕಾರ ಈ ಸಭೆಗೆ ಇರಲಿಲ್ಲ. ಈಗ ಅಧಿಕಾರ ಬಂದಿರುವುದರಿಂದ ನಾವೀಗ ಈ ಅಧಿಕಾರವನ್ನು ಕೊಡುವುದರಲ್ಲಿ ಏನೂ ಬಾಧಕವಿಲ್ಲವೆಂದು ಒಂದು ವಾದ ಹೇಳಿದರು. ನಿಜ. ಆದರೆ ಇವತ್ತಿನ ಪರಿಸ್ಥಿತಿ ಹೇಗಿದೆ. ಈಗ ನಮ್ಮಲ್ಲಿ ರಚಿತವಾಗಿರತಕ್ಕ ಎಂಬುದನ್ನು ಪ್ರಸ್ತಾಪ ಮಾಡುವುದಾದರೆ ಈ ಮಂತ್ರಿ ಮಂಡಲವು

ಶಾಶ್ವತವಾದದ್ದಲ್ಲ. ಏನಿದ್ದರೂ ನಿಜವಾದ ಜವಾಬ್ದಾರಿಯುಳ್ಳ ಮಂತ್ರಿಮಂಡಲ ಯಾವುದೆಂದರೆ ಅದು ಮುಂದೆ ತಯಾರಾಗತಕ್ಕದ್ದು. ಪ್ರಾಪ್ತವಯಸ್ಕರ ಓಟಿನ ಚುನಾವಣೆಯು ನಡೆದು ಪ್ರತಿನಿಧಿಸಭೆಯು ಸೇರಿ ರಚಿತವಾದ ಮಂತ್ರಿ ಮಂಡಲ ಬಂದ ಹೊರತು ಇದನ್ನು ಜವಾಬ್ದಾರಿ ಸರ್ಕಾರವೆಂದು ಹೇಳುವುದಕ್ಕಾಗುತ್ತದೆಯೇ? ಎಂದಿಗೂ ಇಲ್ಲ. ಆದರೆ ಒಂದು ಅವಕಾಶ ಈಗಿದೆ. ಈ ಪ್ರಜಾಪ್ರತಿನಿಧಿಸಭೆಯವರು ಈ ಮಂತ್ರಿ ಮಂಡಲದಲ್ಲಿ ನಂಬಿಕೆಯಿಲ್ಲವೆಂದು ವ್ಯಕ್ತಪಡಿಸಿದರೆ ಅವರು ಕೆಲಸದಿಂದ ಬಿಡಬೇಕೆಂದಿದೆ; ಅಷ್ಟೆ.

ಅದೇನೇ ಇರಲಿ, ಮಂತ್ರಿಮಂಡಲ ಯಾವ ರೀತಿ ರಚಿತವಾಗಿದೆಯೆನ್ನುವ ಪೂರ್ವೋತ್ತರವನ್ನು ಚರ್ಚೆಮಾಡುವ ಕಾಲವಿದಲ್ಲ. ಇದಕ್ಕೆ ಸಂಬಂಧವೂ ಇಲ್ಲ. ಆದರೆ ಇಷ್ಟು ಮಾತ್ರ ಹೇಳಬಹುದು. ಇದು ಏನಿದ್ದರೂ ತಾತ್ಕಾಲಿಕ ಮಂತ್ರಿಮಂಡಲ. ಈ ಮಧ್ಯ ಕಾಲದಲ್ಲಿ ಒಂದು ಹೊಸ ರಾಜ್ಯಾಂಗವನ್ನು ರಚಿಸುವುದಕ್ಕಾಗಿ ಏರ್ಪಾಡಾಗಿರುವ ತಾತ್ಕಾಲಿಕ ಮಂತ್ರಿಮಂಡಲ ಇದು. ಅಂಥಾದ್ದರಲ್ಲಿ ಈ ಮಂತ್ರಿ ಮಂಡಲದವರು ಯಾವಾಗಲೂ ಇಂತಹ ದೇಶದ ಸ್ವಾತಂತ್ರ್ಯಕ್ಕೆ ಅಡ್ಡಿ ತರುವ ಸ್ವಾತಂತ್ರ್ಯವನ್ನು ಮೊಟಕು ಮಾಡುವ ಯಾವ ಕಾನೂನನ್ನೂ ಖಂಡಿತವಾಗಿಯೂ ತರಬಾರದಾಗಿತ್ತೆಂದು ನಾನು ಬಹಳ ವಿಷಾದದಿಂದ ಮಂತ್ರಿಮಂಡಲಕ್ಕೆ ಸೂಚಿಸುತ್ತೇನೆ.

ನನ್ನ ಮಾನ್ಯ ಮಿತ್ರರಾದ ಶ್ರೀಮಾನ್ ಗುಪ್ತರವರೂ ಮತ್ತು ಶ್ರೀ ಕೃಷ್ಣಮೂರ್ತಿಯವರೂ ಈ ಕಾನೂನಿಗೆ ವಿಶೇಷ ಬೆಂಬಲ ಕೊಟ್ಟರು; ಅದರೂ ಕೂಡ ಕೊನೆಯಲ್ಲಿ ಈ ಕಾನೂನಿನ ಉಗ್ರತೆ ಎಷ್ಟು ಮಟ್ಟಗಿದೆಯೆಂದು ಅವರು ತಿಳಿಸಿದ್ದಾರೆ. ವಾಸ್ತವವಾಗಿಯೂ ಬಹಳ ಉಗ್ರವಾಗಿಯೇ ಇದೆ. ಅದನ್ನೇನೂ ನಾನು ಬಹಳ ಹೇಳಬೇಕಾಗಿಲ್ಲ. ಆದ್ದರಿಂದ ನಾನು ಹೇಳುತ್ತೇನೆ. ಇಂಥ ಮಸೂದಾಕಾನೂನನ್ನು ಒಂದು ವರ್ಷಕಾಲ ತಾವೇಕೆ ಇರಿಸಬೇಕು. ಇಂಥ ಹೆಚ್ಚಿನ ಅಧಿಕಾರವನ್ನು ತೆಗೆದುಕೊಳ್ಳುವುದಕ್ಕೆ ತಾವೇಕೆ ಪ್ರಯತ್ನ ಪಡುತ್ತಿದ್ದೀರಿ. ದೇಶದಲ್ಲೆಲ್ಲಾ ಅಂಥ ಅಲ್ಲೋಲ ಕಲ್ಲೋಲವಾಗುವ ಯಾವ ಪರಿಸ್ಥಿತಿ ಉಂಟಾಗಿದೆ? ನಿಜವಾಗಿಯೂ ಅಂಥ ವಿಶೇಷ ಪರಿಸ್ಥಿತಿ ಉಂಟಾದರೆ ನಿಮಗೂ ಕೂಡ ದೇಶದಲ್ಲಿ ನೆಮ್ಮದಿ, ಶಾಂತಿ ಬೇಕೆಂದು ಗೊತ್ತು. ದೇಶದ ಯಾವ ಪ್ರತಿಯೊಬ್ಬರ ಆಕಾಂಕ್ಷೆಯೂ ಅದೇ. ಆದ್ದರಿಂದ ಅಂಥ ಉತ್ಕಟ ಸಂದರ್ಭ ಬಂದಾಗ ನಾವೂ ನಿಮಗೆ ಬೇಕಾದ ಬೆಂಬಲ ಕೊಡುವುದಕ್ಕೆ ಸಿದ್ಧರಾಗಿದ್ದೇವೆ. ಹಾಗೆ ಏನೂ ಇಲ್ಲದೆ, ಹೊರಗಡೆ ನಡೆದಿರುವುದರಿಂದ ಇಲ್ಲಿಯೂ ನಡೆಯಬಹುದೆಂಬ ಒಂದು ಊಹೆಯ ಮೇಲೆ ಇಲ್ಲಿಯ ಈ ಮಸೂದೆಯನ್ನು ತಂದಿರಬಹುದೆಂದು ನನಗೆನ್ನಿಸುತ್ತದೆ.

ಇನ್ನೊಂದು ಕಾರಣವೂ ಇರಬಹುದೆಂದು ನನಗೆ ತೋರುತ್ತದೆ. ಮೈಸೂರು ದೇಶದಲ್ಲಿ ಅಂಥ ಉಗ್ರ ಪರಿಸ್ಥಿತಿಯಿಲ್ಲದೆಯೇ ಇದನ್ನು ತಂದಿರಬೇಕಾದರೆ, ಬಹುಶಃ ಇದರಿಂದ ಯಾವ ವಿರೋಧ ರಾಜಕೀಯ ಪಕ್ಷದ ಪ್ರಗತಿಯ ಬೆಳವಣಿಗೆಗೂ ಅವಕಾಶ ಕೊಡದಿರುವಂತೆ ಮಾಡಲು

ಉದ್ದೇಶಿಸಿರುವಂತೆ ಕಾಣುತ್ತದೆ. ಮಾನ್ಯ ಮಿತ್ರರು ಒಂದು ಉದಾಹರಣೆ ಹೇಳಿದರು. ಮೈಸೂರು ದೇಶದಲ್ಲಿ ಈಚೆಗೆ ನಡೆದ ಚುನಾವಣೆಗಳ ವಿಷಯವನ್ನು ಅವರು ಪ್ರಸ್ತಾಪಿಸಿ ಅದರಿಂದಲೇ ಈ ಸರ್ಕಾರಕ್ಕೆ ಜನರ ಬೆಂಬಲವೆಷ್ಟಿದೆಯೆಂಬುದು ಗೊತ್ತಾಗುತ್ತದೆಂದು ಹೇಳಿದರು. ಆದರೆ, ಆ ಚುನಾವಣೆಗಳ ವೈಖರಿ ಎಷ್ಟರ ಮಟ್ಟಗಿತ್ತೆಂಬದನ್ನು ಬೇರೆ ಸಂದರ್ಭದಲ್ಲಿ ನಾನು ಹೇಳುವವನಾಗಿದ್ದೇನೆ. ಅಲ್ಲದೆ ಹೊರಗಡೆ ಡಿಸ್ಟ್ರಿಕ್ಟ್ ಬೋರ್ಡ್ ಚುನಾವಣೆಗಳಲ್ಲಿ ಯಾವ ಯಾವ ಪಾರ್ಟಿಯವರು ಅಪಜಯ ಹೊಂದಿದರೋ ಅದಕ್ಕೆ ಕಾರಣವನ್ನು ಸಹ ಆಗಲೇ ಪಾರ್ಟಿ ಮುಖಂಡರು ತಿಳಿಯಪಡಿಸಿದ್ದಾರೆ. ಆದ್ದರಿಂದ ಆ ವಿಚಾರವನ್ನು ನಾನಿಲ್ಲಿ ಬೆಳೆಸುವುದಿಲ್ಲ. ಇದರಿಂದ ಏನು ಒಂದು ಶಂಕೆ ಬರುತ್ತೆಂದರೆ, ಬೇರೆ ಯಾವ ರಾಜಕೀಯ ಪಕ್ಷಗಳೂ ಯಾವ ರೀತಿಯ ಚಟುವಟಿಕೆಗಳಾಗಲೀ ನಡೆಸುವುದಕ್ಕೆ ಅವಕಾಶವಿಲ್ಲದಂತೆ ಮಾಡುವುದಕ್ಕೆ ಈ ಕಾನೂನಿನಿಂದ ಒಂದು ಅಧಿಕಾರ ಸಿಕ್ಕುತ್ತದೆಂದು ಹೇಳುತ್ತೇನೆ. ಇದರಲ್ಲಿ ಸಭೆಗಳನ್ನು ನಡೆಸುವುದನ್ನು ನಿಲ್ಲಿಸಬಹುದೆಂದು ಏಕೆ ಹೇಳಿದ್ದಾರೆ? ಈಗ ನಡೆಯುತ್ತಿರುವ ರಾಜ್ಯಾಂಗ ಸಭೆಯಿಂದ ರಾಜ್ಯಾಂಗ ರಚನೆಯಾದ ಮೇಲೆ ಬರುವ ಚುನಾವಣೆಗಳಲ್ಲಿ ಬೇರೆ ಪಾರ್ಟಿಗಳವರಿಗೆ ಚುನಾವಣೆಯ ಪ್ರಚಾರ ಮಾಡಲು ಅವಕಾಶವಿರಕೂಡದೇನು? ಈ ಕಾನೂನಿನ ಮುಂದೆ ಬೇರೆ ಯಾವ ಪಾರ್ಟಿಯಾದರೂ ತಲೆಯೆತ್ತುವುದಕ್ಕೆ ಅವಕಾಶವಿದೆಯೇ? ಇದನ್ನು ಮುಖ್ಯವಾಗಿ ಮಾನ್ಯ ಸದಸ್ಯರು ಯೋಚನೆ ಮಾಡಬೇಕು.

ಈಗ ಅಧಿಕಾರದಲ್ಲಿರತಕ್ಕ ಕಾಂಗ್ರೆಸ್ ಪಕ್ಷಕ್ಕೆ ವಿರೋಧಾಭಿಪ್ರಾಯವನ್ನು ಸೂಚನೆ ಮಾಡುವ ಇನ್ನಾವ ರಾಜಕೀಯ ಪಕ್ಷಕ್ಕೆ ಅವಕಾಶವಿರಬಾರದು, ಆ ರೀತಿಯಾಗಿ ತಡೆಗಟ್ಟುವುದಕ್ಕೆ ಏನೇನು ಸಾಧನಗಳು ಬೇಕೋ ಅದನ್ನೆಲ್ಲಾ ಸರ್ಕಾರದವರು ಇಟ್ಟುಕೊಳ್ಳಬೇಕೆಂಬ ಮನಸ್ಸು ಮಾಡಿದ್ದಾರೋ ಏನೋ ಎಂಬ ಶಂಕೆ ನನಗಿದೆ.

ಸಭೆಗಳನ್ನು ಮಾಡಕೂಡದು, ಒಂದು ಯೂನಿಫಾರಂ ಹಾಕಿಕೊಳ್ಳಕೂಡದು ಎಂದು ಹೇಳಿದ್ದಾರೆ. ನಾಳೆಯ ದಿವಸ ನಮ್ಮ ಪಾರ್ಟಿಯವರೆಲ್ಲರೂ ಒಂದು ಚೆಡ್ಡಿ ಹಾಕಿಕೊಳ್ಳಬೇಕೆಂದು ಹೇಳಬಹುದು. ಈ ಕಾನೂನಿನ ಪ್ರಕಾರ ಅದನ್ನು ಅಡ್ಡಿಪಡಿಸಬಹುದು.

**ಶ್ರೀ ಟಿ. ಮರಿಯಪ್ಪನವರು**–ಚಡ್ಡಿ ಹಾಕಿಕೊಂಡರೆ ಖಂಡಿತವಾಗಿಯೂ ಯಾರೂ ನಿಮ್ಮನ್ನು ತಡೆಯುವುದಿಲ್ಲ.

**ಶ್ರೀ ಎಸ್.ಸಿ. ಮಲ್ಲಯ್ಯನವರು**–ಅದನ್ನು ಇಲ್ಲಿ ಹೇಳಿಲ್ಲ. ಯೂನಿಫಾರಂ ಎಂದರೆ, ಚಡ್ಡಿ, ಕೋಟು, ಎಲ್ಲ ಸೇರುತ್ತದೆ. ಯೂನಿಫಾರಂ ಎಂಬುದರ ಅರ್ಥವನ್ನು ಇಲ್ಲ ಎಲ್ಲೂ ವಿಶದಪಡಿಸಿಲ್ಲ. ಭಾಷಣಗಳನ್ನು ಮಾಡುವುದು, ಪ್ರಚಾರ ಉಪನ್ಯಾಸ ಮುಂತಾದುವುಗಳನ್ನು ನಡೆಸುವುದು, ಎಲ್ಲಾ

ವಿಷಯಗಳಲ್ಲೂ ಇಷ್ಟೆ. ಆದ್ದರಿಂದ ತಾವು ಸರಿಯಾದ ಮಾರ್ಗದಲ್ಲಿ ತಾವು ಇಡೀ ದೇಶವನ್ನು ಇಡೀ ಜನತೆಯನ್ನು ಅದರಲ್ಲಿ ಒಂದು ವೇಳೆ ಭಿನ್ನಾಭಿಪ್ರಾಯವಿದ್ದರೂ ಕೂಡ, ಅದರಲ್ಲಿ ಸ್ನೇಹ ನಾಚಿಕೆಗಳನ್ನು ಹುಟ್ಟಿಸಿ, ಅವರನ್ನು ಪರಿವರ್ತನೆ ಮಾಡಿಕೊಳ್ಳಬೇಕೇ ಹೊರತು ಹಾಗೆ ಮಾಡದೆ ಈ ರೀತಿಯಾಗಿ ಮಸೂದಾ ಕಾನೂನಿನ ಬೆಂಬಲದಿಂದ ರಾಜ್ಯಭಾರ ನಡೆಸುತ್ತೇವೆಂದು ಹೇಳಿದರೆ ಅದು ಒಳ್ಳೆಯ ರಾಜ್ಯಭಾರವಾಗುವುದಿಲ್ಲ. ಅದು ಎಂದೂ ಶಾಶ್ವತವಾಗಿರುವುದಿಲ್ಲ. ಈ ದೃಷ್ಟಿಯಿಂದ ತಾವಿದನ್ನು ತೀವ್ರಾಲೋಚನೆ ವಾಪಸು ತೆಗೆದುಕೊಳ್ಳಬೇಕೆಂದು ನಾನು ಮಾಡಿ ಕೇಳಿಕೊಳ್ಳುತ್ತೇನೆ.



ಸಾರ್ವಜನಿಕ ಹಿತರಕ್ಷಣೆ ಹಾಗೂ ಸಮಾಜ ಸ್ವಾಸ್ಥ್ಯ ಸಂರಕ್ಷಣೆಯ ದೃಷ್ಟಿಯಿಂದ ಮಲ್ಲಯ್ಯನವರ 1939ರ ಮಾರ್ಚ್ 17ನೇ ತಾರೀಖಿನ ಭಾಷಣವೂ ಉಲ್ಲೇಖಾರ್ಹ.

ಅನನುಭವಿಗಳಿಂದ ಕಾಂಗ್ರೆಸ್ಸಿನ ಹೆಸರು ಕೆಡಬಾರದು !

**Mr. S.C. Mallaiah** supporting the bill, regretted that the introduction of such a measure should have become necessary in such a progressive State as Mysore in which a number of ruling princes were receiving administrative training. The speaker had the greatest respect for the Congress and its true followers, coming as he did from the place in which the first conference of congressmen all over the State had been held in an admirable manner and knowing full well the noble intentions and high ideals of the great organisation called the Congress. But he was also personally aware that certain wrong type of persons were calling themselves congressmen and were conducting themselves in the interior parts in objectionable ways. From the point of view of the Congress itself, its fair name would suffer if its leadership was left in the hands of untried and inexperienced persons. The previous speaker had characterised the proposed law as too dangerous a weapon to be lightly handled by anybody.

The speaker asked whether it would be a sharper weapon than *Satyagraha* **Mahatma Gandhi himself had stated that *Satyagraha* was so sharp and difficult a weapon that he alone was competent to handle it** and even the best tried among his followers was not yet competent to use it. Secondly, the situation in Mysore at the present day had so far worsened that open disobedence to law and defiance of authority had become a common affair and unless this was effectively stopped, the prestige of the Government as well as the reputation of the State was sure to suffer and public safety also endangered. When public safety was endangered, the Government could not sit with folded hands and shirk their responsibility for restoring law and order.

With regard to the point urged by some earlier speakers that whatever action was called for could be taken even under the laws already existing and that therefore there was no necessity for enacting a special law, he observed that any number of laws would not harm anybody if the punishments contemplated under them were such as could be meted out even under the existing laws. The fact of the matter was that there was a special purpose to be served by this law which could not be served by the existing laws, viz., that cases could be disposed of with due expedtion, whereas under the ordinary laws, the formalities prescribed would involve considerable delay. For this reason, the speaker had no doubt that the proposed law was both necessary and desirable.

The member then referred to the inadvisability of carrying on an agitation in the State in which the Government sympathetically heard all representations from the public and promptly provided every possible relief. Even in regard to the political progress of the State, he said that His Highness the Maharaja would certainly confer whatever reforms

were really called for from time to time. In this view the speaker hoped that better counsels might yet prevail among the local Congress ranks and that those engaged in carrying on the agitation would in future so conduct themselves as to enhance the reputation of the State of which everybody had just reason to be proud.



**ಮೈಸೂರು ಸಂಸ್ಥಾನದಲ್ಲಿ ಸರಕುಗಳ ಮಾರಾಟದ ಮೇಲೆ ತೆರಿಗೆಯನ್ನು ವಿಧಿಸುವುದಕ್ಕೆ ಸಂಬಂಧಪಟ್ಟ ಮಸೂದಾ ಕಾನೂನಿನ ವಿಚಾರ 1948ರ ಜೂನ್ 6ರಂದು ಸದನದಲ್ಲಿ ಪರ್ಯಾಲೋಚನೆಗೆ ಬಂದಿತು. ಆ ಸಂದರ್ಭದಲ್ಲಿ ಮಲ್ಲಯ್ಯನವರು ನೀಡಿರುವ ಉತ್ತಮ ಸಲಹೆಗಳು ಈ ಭಾಷಣದಲ್ಲಿವೆ.**

## ಪಾನನಿರೋಧಕ್ಕೆ ಬದಲಿ ತೆರಿಗೆ ಏಕೆ?

ಅಧ್ಯಕ್ಷರೇ, ನೀವು ನಮ್ಮ ಮುಂದೆ ಮಂಡಿಸಿರತಕ್ಕ ಈ ಮಾರಾಟದ ತೆರಿಗೆಯ ಮಸೂದೆಯನ್ನು ನಾನು ವಿರೋಧಿಸುತ್ತಾ ಒಂದೆರಡು ವಿಷಯಗಳನ್ನು ತಿಳಿಸಬೇಕೆಂದಿದ್ದೇನೆ. ನಾನು ವಿರೋಧ ಮಾಡತಕ್ಕ ವಾದಗಳಾದರೂ ಕೂಡ ಬಹಳ ಜವಾಬ್ದಾರಿಯುತ - ವಾದುವುಗಳೆಂದೂ ಮತ್ತು ಜವಾಬ್ದಾರಿಯುತವಾಗಿಯೇ ನಾನು ಆ ವಾದವನ್ನು ಸರ್ಕಾರದವರ ಮುಂದಿಡುತ್ತಿದ್ದೇನೆಂಬ ಅಂಶವನ್ನು ತಾವು ಮರೆಯಬಾರದೆಂದೂ ನಾನು ಹೇಳುತ್ತೇನೆ.

ಈಗ ತಾವು ಈ ಮಸೂದೆಯಲ್ಲಿ ಏಕೆ ಈ ಮಾರಾಟದ ತೆರಿಗೆಯನ್ನು ವಿಧಾಯಕ ಮಾಡಬೇಕೆಂದು ಹೇಳಿದ್ದೀರಿ. ಮುಖ್ಯವಾಗಿ ನಮ್ಮ ದೇಶದಲ್ಲಿ ಪಾನ ನಿರೋಧವನ್ನು ಕೈಕೊಳ್ಳತಕ್ಕ ಉದ್ದೇಶದಿಂದ ಈ ತೆರಿಗೆಯನ್ನು ವಿಧಿಸಬೇಕಾಯಿತೆಂದು ಹೇಳಿದರು. ಈ ಪಾನ ನಿರೋಧ ಕಾರ್ಯ ಮೈಸೂರು ದೇಶದಲ್ಲಿ ನಮಗೆಲ್ಲಾ ಗೊತ್ತಿರುವಂತೆ ಬಹಳ ಹಿಂದೆಯೇ ಜಾರಿಗೆ ಬಂದಿದೆ. ತಾವು ಮುಂದಿನ ಜುಲೈ ಒಂದನೆಯ ತಾರೀಖಿನಿಂದ ಮೂರು ಡಿಸ್ಟ್ರಿಕ್ಟುಗಳಲ್ಲಿ ಪಾನನಿರೋಧವನ್ನು ಜಾರಿಗೆ ತರಬೇಕೆಂದು ಯಾವ ಏರ್ಪಾಡನ್ನು ಮಾಡಿದ್ದೀರೋ ಆ ಏರ್ಪಾಡು ಕಳೆದ ವರ್ಷವೂ ಕೂಡ ಶೇಕಡ 20ರಷ್ಟು ಇತ್ತು. ಮದ್ಯಪಾನವು ನಮ್ಮ ದೇಶದಲ್ಲಿ ವರ್ಷವರ್ಷವೂ ಕಡಿಮೆಯಾಗಿ ಐದು ವರ್ಷಗಳ ಅವಧಿಯಲ್ಲಿ ಸಂಪೂರ್ಣವಾಗಿ ಪಾನನಿರೋಧ ಜಾರಿಗೆ ಬರಬೇಕೆಂಬ ತತ್ವವನ್ನು ಹಿಂದಿದ್ದ ಸರ್ಕಾರವೂ ಕೂಡ ಒಪ್ಪಿಕೊಂಡು ಅದನ್ನು ಕಾರ್ಯಗತಮಾಡಿತು. ಅದು ತಮಗೇ ಚೆನ್ನಾಗಿ ಗೊತ್ತಿರುವಂತೆ

ನಾನು ಭಾವಿಸುತ್ತೇನೆ. ಅವರು ಆ ರೀತಿಯಾಗಿ ಐದು ವರ್ಷದ ಅವಧಿಯಲ್ಲಿ ವರ್ಷವರ್ಷಕ್ಕೂ ಶೇಕಡಾ 20ರಷ್ಟು ಕಡಮೆಮಾಡುತಾ ಪಾನನಿರೋಧವನ್ನು ಜಾರಿಗೆ ತರಬೇಕೆಂದಾಗ ನಮ್ಮ ದೇಶದ ಅಬ್ಕಾರಿ ಉತ್ಪತ್ತಿಯೂ ಕೂಡ ಕಡಮೆಯಾದುದು ನಿಜ. ಆದರೂ ಆಗಿದ್ದ ಸರ್ಕಾರದವರು ಈ ತೆರದ ಹೊಸ ತೆರಿಗೆಯನ್ನು ಹಾಕಬೇಕೆಂದು ಯೋಚನೆ ಮಾಡಲಿಲ್ಲ. ಅವರು ಏನಿದ್ದರೂ ಬರತಕ್ಕ ವರಮಾನ ಯಾವುದಿದೆಯೋ ಅದರಿಂದಲೇ ಈ ಕಾರ್ಯವನ್ನು ನಡೆಸಬೇಕೆಂದು ಹೇಳಿದರು. ಅಂಥಾದ್ದರಲ್ಲಿ ನೀವು ಈಗ ಮೂರು ಡಿಸ್ಟ್ರಿಕ್ಟ್‌ಗಳಲ್ಲಿ ಪಾನನಿರೋಧವನ್ನು ಜಾರಿಗೆ ತರುವುದರಿಂದ ನಿಮಗೆ ಬಹಳ ನಷ್ಟವಾಗುತ್ತದೆಂದು ಹೇಳಿ ಅದನ್ನು ಸರಿತೂಗಿಸುವುದಕ್ಕಾಗಿ ಈ ತೆರಿಗೆ ಅವಶ್ಯಕವೆಂದು ಒಂದು ವಾದ ಹೇಳಲಾಯಿತು. ಈ ವಾದ ಎಷ್ಟು ಸಮಂಜಸವೆಂದು ಸ್ವಲ್ಪ ವಿಮರ್ಶೆ ಮಾಡೋಣ. ಈಗ ತಮಗೆ ಗೊತ್ತಿರುವ ಹಾಗೆ ಮೂರು ಡಿಸ್ಟ್ರಿಕ್ಟ್‌ಗಳಲ್ಲಿ ಪಾನನಿರೋಧವನ್ನು ಜಾರಿಗೆ ತಂದಿದ್ದರೂ ಕೂಡ ನಿಮ್ಮ ಅಬ್ಕಾರಿ ಉತ್ಪತ್ತಿ ಎಷ್ಟರಮಟ್ಟಿಗೆ ಈ ವರ್ಷ ಜಾಸ್ತಿಯಾಗಿದೆಯೆಂದು ನೋಡಿದರೆ ತಾವು ಕೊಟ್ಟಂಥ ವಾದ ಎಷ್ಟು ಮಾತ್ರವೂ ಸರಿಯಲ್ಲವೆಂದು ಹೇಳಬೇಕಾಗಿದೆ. ಒಂದು ವೇಳೆ ನಮ್ಮ ಸಂಸ್ಥಾನದಲ್ಲಿ ಪಾನನಿರೋಧ ಕಾರ್ಯವನ್ನು ಒಂದೇ ಸಲ ಜಾರಿಗೆ ತಂದಿದ್ದರೆ ಆಗ ನಿಜವಾಗಿಯೂ ಸರ್ಕಾರಕ್ಕೆ ಒಂದು ದೊಡ್ಡ ಹೊರೆ ಇರುತ್ತದೆಂದು ಹೇಳಿ ಅದಕ್ಕೆ ನಾವು ಬೆಂಬಲರಾಗಿ ನಿಲ್ಲಬೇಕೆಂಬ ಒಂದು ಸತ್ಯಾಂಶ ಉದ್ಭವವಾಗುತ್ತಿತ್ತು. ಆದರೆ ಇವತ್ತಿನ ಪರಿಸ್ಥಿತಿಯಲ್ಲಿ ತಾವು ಮೂರು ಡಿಸ್ಟ್ರಿಕ್ಟುಗಳಲ್ಲಿ ಪಾನನಿರೋಧವನ್ನು ಜಾರಿಗೆ ತಂದರೂ ಕೂಡ ನಮ್ಮ ಉತ್ಪತ್ತಿ ಕಡಮೆಯಾಗದಿರುವುದರಿಂದ ಆ ವಾದ ಹಿಡಿಸುವುದಿಲ್ಲ. ಅಲ್ಲದೆ ಇವತ್ತಿನ ದಿವಸ ತಾವು ಈ ಮೂರು ಜಿಲ್ಲೆಗಳಲ್ಲಿ ಪಾನನಿರೋಧವನ್ನು ಜಾರಿಗೆ ತಂದುದರ ಫಲಿತಾಂಶವೇನಾಗಿಯೆಂದು ತಾವು ನೋಡುವುದಾದರೆ ನಿಜವಾಗಿಯೂ ಯಾವ ಒಳ್ಳೆಯ ಉದ್ದೇಶದಿಂದ ಪಾನನಿರೋಧ ಉಂಟಾಗಬೇಕೆಂದು ಅಪೇಕ್ಷೆ ಮಾಡಿದೆವೋ ಅದು ಇವತ್ತಿನ ದಿವಸ ಉಂಟಾಗಿದೆಯೆಂದು ನಾನಂತೂ ನಂಬಲಾರೆ. ಏಕೆಂದರೆ ಒಂದು ಉದಾಹರಣೆ ಕೊಡುವುದಾದರೆ ಈ ಮೂರು ಡಿಸ್ಟ್ರಿಕ್ಟಿನ ವರಮಾನವೇ ಉಳಿದ ಆರು ಡಿಸ್ಟ್ರಿಕ್ಟಿನಿಂದ ಬರತಕ್ಕ ವರಮಾನಕ್ಕಿಂತ ಜಾಸ್ತಿಯಾಗಿದೆ. ಇದರಿಂದ ಕುಡಿಯತಕ್ಕವರ ಮೇಲೆ ಇನ್ನಷ್ಟು ಹೆಚ್ಚಿನ ಹೊರೆಬೀಳಲು ಅವಕಾಶವಾಯಿತೆಂದು ಎಲ್ಲರೂ ಒಪ್ಪಿಕೊಳ್ಳಬೇಕು. ಆದ್ದರಿಂದ ಬರೀ ಈ ಮೂರು ಡಿಸ್ಟ್ರಿಕ್ಟಿನಲ್ಲಿ ಪಾನನಿರೋಧವನ್ನು ನಿಲ್ಲಿಸಿದ್ದರಿಂದ ಈ ತೆರಿಗೆಯ ಅವಶ್ಯಕತೆ ಉಂಟಾಗಿದೆಯೆಂದು ನಾವು ಒಪ್ಪುವುದಕ್ಕಾಗುವುದಿಲ್ಲ.

ಎರಡನೆಯದಾಗಿ ತಾವು ಇನ್ನೊಂದು ವಾದವನ್ನು ನಮ್ಮ ಮುಂದಿಟ್ಟಿದ್ದೀರಿ. ಈ ತೆರದ ತೆರಿಗೆ ಅನೇಕ ಪ್ರಾಂತ್ಯಗಳಲ್ಲಿದೆಯೆಂದು ಹೇಳಿದಿರಿ. ಕೆಲವು ಪ್ರಾಂತ್ಯಗಳಲ್ಲಿ ಇನ್ನೂ ಈ ತೆರಿಗೆಯನ್ನು ಹಾಕದೇನೇ ಸರ್ಕಾರವನ್ನು ನಡೆಸತಕ್ಕ ಪದ್ಧತಿ ಇದೆಯೆಂಬುದನ್ನು ಬಹುಶಃ ತಾವು ಒಪ್ಪುತ್ತೀರೆಂದು ನಂಬಿದ್ದೇನೆ.

ತಮಗೇ ಗೊತ್ತಿರುವ ಹಾಗೆ ತಾವು ಅಧಿಕಾರಕ್ಕೆ ಬರುವ ಮುನ್ನ ಅನೇಕ ವೇದಿಕೆಗಳ ಮೇಲೆಯೂ ಮತ್ತು ವೃತ್ತ ಪತ್ರಿಕೆಗಳಲ್ಲೂ ಸಾರ್ವತ್ರಿಕವಾಗಿ ಇಂಥ ಸಭೆಗಳಲ್ಲೂ ಅನೇಕಸಲ ನಮ್ಮ ದೇಶದ ಪರಿಸ್ಥಿತಿ ಹೇಗಿದೆ, ನಮ್ಮಲ್ಲಿ ತಲೆಭಾರವಾದ ಆಡಳಿತ ವರ್ಗವಿದೆಯೆಂದು ಯಾವುದನ್ನು ಪ್ರತಿಪಾದಿಸುತ್ತಿದ್ದಿರೋ, ಆ ವಿಷಯದಲ್ಲಿ ಇವತ್ತಿನ ದಿವಸ ಆ ತಲೆ ಭಾರವನ್ನಿಳಿಸುವುದಕ್ಕೆ ತಾವೇನು ಕಾರ್ಯಕ್ರಮ ಕೈಗೊಂಡಿದ್ದೀರಿ, ಎಷ್ಟು ಮಟ್ಟಿಗಿಳಿಸಿದ್ದೀರೆಂಬುದನ್ನು ತಿಳಿಸ್ತುವುದಾದರೆ ಬಹುಮಟ್ಟಿಗೆ ನಾನು ತಮ್ಮನ್ನು ಅಭಿನಂದಿಸುತ್ತಿದ್ದೆ. ಆದರೆ ಎಲ್ಲಿಯೂ ಕೂಡ ಹಾಗೆ ಕಡಿಮೆ ಮಾಡುವಂತೆ ಕಂಡುಬಂದಿಲ್ಲ. ಅದಕ್ಕೆ ಬದಲು ಖರ್ಚುಬಾಬ್ತು ಇನ್ನೂ ಹೆಚ್ಚಿಗೆ ಬೆಳೆಯುತ್ತಿದೆಯೆಂದು ಹೇಳಿದರೂ ಉತ್ಪ್ರೇಕ್ಷೆಯಾಗಲಾರದೆಂದು ನಾನು ಖಂಡಿತವಾಗಿಯೂ ತಿಳಿಸಬೇಕಾಗಿದೆ. ಏಕೆಂದರೆ ಈ ವಿಷಯ ನಿರ್ವಿವಾದವಾದದ್ದು. ನಮ್ಮ ದೇಶದ ಉತ್ಪತ್ತಿ ನಮ್ಮ ದೇಶದ ಅವಶ್ಯಕತೆ ಮತ್ತು ಯೋಗ್ಯತೆಗೆ ತಕ್ಕಂತೆ ಖರ್ಚುಮಾಡುವ ಭಾಗದಲ್ಲಿ ಎಷ್ಟು ಮಟ್ಟಿಗೆ ಖೋತಾಮಾಡಬೇಕಾದ ವಿಷಯದಲ್ಲಿ ಯಾವುದನ್ನು ತಾವು ಹೇಳುತ್ತಿದ್ದಿರೋ ಅದನ್ನು ತಾವೇ ಕಾರ್ಯರೂಪಕ್ಕೆ ತರುವುದಕ್ಕೆ ಅವಕಾಶವಾಗಲಿಲ್ಲವೆಂಬ ವ್ಯಸನವನ್ನು ತಮಗೆ ಸೂಚಿಸಬೇಕಾಗಿದೆ. ಆ ಮಾರ್ಗವನ್ನು ತಾವು ಸಂಪೂರ್ಣವಾಗಿ ಉಪಯೋಗಿಸದರೆ, ತಾವು ಹೆಚ್ಚು ಕಂದಾಯ ಹಾಕತಕ್ಕ ಒಂದು ಮಾರ್ಗವನ್ನೇ ವಿಶೇಷವಾಗಿ ಅನುಸರಿಸಿ ಈ ಮಸೂದೆಯನ್ನು ನಮ್ಮ ಮುಂದೆ ಇಟ್ಟಿರತಕ್ಕ ವಿಷಯಕ್ಕೆ ನಾನು ಬಹಳ ವಿಷಾದಿಸಬೇಕಾಗಿದೆ.

ಮತ್ತೊಂದು ವಿಷಯ. ತಾವು ಒಂದು ವಿಷಯವನ್ನು ಪ್ರಾಮುಖ್ಯವಾಗಿ ಹೇಳಿದಿರಿ. ಈ ತೆರಿಗೆಯಿಂದ ಜನಸಾಮಾನ್ಯರಿಗೇನೂ ತೊಂದರೆಯಾಗುವುದಿಲ್ಲ, ಏನಿದ್ದರೂ ಯಾರಿಗೆ ಖರ್ಚುಮಾಡುವ ಯೋಗ್ಯತೆ ಇದೆಯೋ ಅಂಥವರಿಗೆ ಮಾತ್ರ ಇದು ಅನ್ವಯಿಸುತ್ತದೆಂದು ಖರ್ಚುಮಾಡುವುದಕ್ಕೆ ಯೋಗ್ಯತೆಯಿಲ್ಲದವರಿಗೆ ಈ ಕಷ್ಟ ಬರುವುದೇ ಇಲ್ಲವೆಂದು ಹೇಳಿದ್ದಾರೆ. ಈ ವಾದವನ್ನು ನಾನು ಎಷ್ಟು ಮಾತ್ರವೂ ಒಪ್ಪಲಾರೆ. ಜನಸಾಮಾನ್ಯರಿಗೆ ಸಂಪೂರ್ಣವಾಗಿ ಅನ್ವಯಿಸತಕ್ಕ ವಿಷಯ ಇದೆ. ತಾವು ಒಂದು ತೆರಿಗೆಯನ್ನು ವಿಧಾಯಕಮಾಡಿದರೆ, ಮಾರಾಟ ಮಾಡುವವನೇ ಆಗಲಿ, ದಳ್ಳಾಳಿಯೇ ಆಗಲಿ, ಆ ದುಡ್ಡನ್ನು ಕೊಡುತ್ತಾನೆಯೇ ಹೊರತು ಪದಾರ್ಥವನ್ನು ಕೊಂಡುಕೊಳ್ಳುವವನು ಖಂಡಿತವಾಗಿಯೂ ಅದನ್ನು ಕೊಡುವುದಿಲ್ಲ. ತಾವು ಎಷ್ಟು ತೆರಿಗೆ ಹಾಕುತ್ತೀರೋ ಅದನ್ನು ಪದಾರ್ಥದ ಬೆಲೆಯಲ್ಲಿ ಸೇರಿಸಿಯೇ ಮಾರಾಟ ಮಾಡಬೇಕೆಂದು ಹೇಳಿದರೂ ಕೂಡ ಕೊಂಡ. ಕೊಳ್ಳತಕ್ಕವನು ಅಷ್ಟನ್ನು ಕೊಡದೇ ಹೋದರೆ ತೆರಿಗೆ ಯಾರಮೇಲೆ ಬೀಳುತ್ತದೆಂಬುದನ್ನು ತಾವೇ ಹೇಳಬಹುದು. ಅಲ್ಲದೆ, ತಾವು ತೆರಿಗೆ ಹಾಕುವುದು, ಈಗಾಗಲೇ ಪದಾರ್ಥಗಳ ಬೆಲೆ ಮಿತಿಮೀರಿ ಹೋಗಿ ಜನಸಾಮಾನ್ಯರಿಗೆ ಅವಶ್ಯಕವಾದ ಪದಾರ್ಥಗಳನ್ನು ಕೊಳ್ಳತಕ್ಕದ್ದು ಇನ್ನಷ್ಟು ಕಷ್ಟವಾಗುತ್ತದೆಂದು ಹೇಳಬಹುದು. ಇದು ಸರಿಯೇ ಎಂಬ ವಿಷಯವನ್ನು ತಾವೇ ಆಲೋಚನೆ ಮಾಡಬೇಕು. ಜನಸಾಮಾನ್ಯರಿಗೆ ಅವಶ್ಯಕವಾಗಿ ಬೇಕಾದ ಪದಾರ್ಥಗಳ ಬೆಲೆ ಎಷ್ಟು ಕಡಮೆಯಾದ ಖರೀದಿಗೆ

ಸಾಧ್ಯವೋ ಅಷ್ಟಕ್ಕೆ ದೊರಕಿಸಿಕೊಡುವ ಹಾಗೆ ಮಾಡುವುದು ಯಾವ ಸರ್ಕಾರದವರಾದರೂ ಮಾಡಬೇಕಾದ ಕರ್ತವ್ಯ. ಹೀಗಿರುವಾಗ ಆ ಪದಾರ್ಥಗಳಿಗೆ ಮಿತಿಮೀರಿದ ಈ ಹೊರೆಯಿಂದ ಬೆಲೆಗಳು ಇನ್ನೂ ಹೆಚ್ಚಾಗಿ ಏರುವಂತಾಗಿ ಪದಾರ್ಥಗಳನ್ನು ಕೊಳ್ಳುವುದಕ್ಕೆ ಇನ್ನೂ ದುಸ್ತರವಾದರೆ ಯಾವ ಪರಿಣಾಮವಾಗುತ್ತದೆಂಬುದನ್ನು ನೀವೇ ಯೋಚನೆ ಮಾಡಬಹುದು.

ಇನ್ನೊಂದು ವಿಷಯ. ನಾನು ತಮಗೆ ಹೇಳಬೇಕಾಗಿದೆ. ಯಾವಾಗಲೂ ಒಂದು ಹೊಸ ತೆರಿಗೆಯನ್ನು ಹಾಕುವುದು ಬಹು ಮುಖ್ಯವಾದ ಮತ್ತು ಜವಾಬ್ದಾರಿಯುತವಾದ ಕಾರ್ಯ. ಯಾವ ತೆರಿಗೆಯಾಗಲಿ ಅದನ್ನು ವಿಧಿಸಬೇಕಾದರೆ ಸಾರ್ವತ್ರಿಕ ಅಭಿಪ್ರಾಯವನ್ನು ತೆಗೆದುಕೊಳ್ಳದೆ ವಿಧಿಸುವುದು ಸರಿಯಲ್ಲವೆಂದು ಸೂಚಿಸುತ್ತೇನೆ. ಅಲ್ಲದೆ ಈಗಿನ ಪ್ರಜಾಸರ್ಕಾರ ಎಷ್ಟುಮಟ್ಟಿಗೆ ಜನರ ಪ್ರಾತಿನಿಧ್ಯವನ್ನು ಗಳಿಸಿದೆ ಎಂಬುದನ್ನು ನಾವು ಮೊಟ್ಟಮೊದಲು ಅರಿಯಬೇಕು. ಈ ದೃಷ್ಟಿಯಲ್ಲಿ ನೋಡುವುದಾದರೆ ನೀವು ಇಲ್ಲಿರತಕ್ಕವರ ಪ್ರತಿನಿಧಿಗಳು ಜನ ಸಾಮಾನ್ಯರ ಪ್ರತಿನಿಧಿಗಳಲ್ಲ. ಒಂದು ಗೊತ್ತಾದ ಅಥವಾ ನಿಗಧಿಯಾದ ಕೆಲವು ಜನರ ಪ್ರತಿನಿಧಿಗಳೇ ಹೊರತು ಸಾರ್ವತ್ರಿಕವಾಗಿ ದೇಶದ ಎಲ್ಲ ಜನರ ಪ್ರತಿನಿಧಿಗಳೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಒಂದು ವೇಳೆ ಜನಸಾಮಾನ್ಯರೆಲ್ಲರ ಅಭಿಪ್ರಾಯವನ್ನು ಪಡೆಯದೆ ಈ ರೀತಿ ತೆರಿಗೆಯನ್ನು ಹಾಕುವುದು ಸರಿಯಲ್ಲವೆಂದು ಹೇಳುತ್ತೇನೆ. ಈಗ ಈ ಮಸೂದೆಗೆ ಆಗತ್ಯವೂ ಇಲ್ಲ, ಅವಶ್ಯಕತೆಯೂ ಇಲ್ಲ. ಒಂದು ಪಾನನಿರೋಧವನ್ನು ಒಟ್ಟು ದೇಶದಲ್ಲೆಲ್ಲಾ ತಂದಾಗ ಇದನ್ನು ಅಲೋಚಿಸಲು ಸಾಧ್ಯವೇ ಈಗ ಇದನ್ನು ಅನುಮೋದಿಸುವುದಕ್ಕಾಗಿವುದಿಲ್ಲ. ಅದುದರಿಂದ ಇದನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಸೂಚಿಸುತ್ತೇನೆ.

  

**ಪಾನನಿರೋಧ'ವನ್ನು ತೀವ್ರವಾಗಿ ಎತ್ತಿಹಿಡಿದಿದ್ದ ಮಲ್ಲಯ್ಯನವರು ಜೂಜಾಟವನ್ನೂ ಅಷ್ಟೇ ತೀವ್ರವಾಗಿ ವಿರೋಧಿಸುತ್ತಿದ್ದರು. ಅದಕ್ಕೆ ನಿದರ್ಶನವೆಂಬಂತೆ 9.10.48ರಂದು ಜೂಜು ಕಟ್ಟುವುದರ ಮೇಲೆ ತೆರಿಗೆ ವಿಧಿಸುವುದಕ್ಕೆ ಸಂಬಂದಪಟ್ಟ (ತಿದ್ದುಪಡಿ) ಮಸೂದಾ ಕಾನೂನನ್ನು ಪರ್ಯಾಲೋಚಿಸುತ್ತಾ ಅವರು ಮಾಡಿರುವ ಭಾಷಣವನ್ನು ಗಮನಿಸಿ.**

## ಜೂಜು ಬಹಳಕೆಟ್ಟ ಪದ್ಧತಿ

ಅಧ್ಯಕ್ಷರೇ, ಈಗ ನಮ್ಮ ಮುಂದೆ ಬಂದಿರತಕ್ಕ ಮಸೂದೆಯನ್ನು ಸಭೆಯ ಮುಂದೆ ಮಂಡಿಸಿದ ಮಾನ್ಯ ಸಚಿವರು ಆ ಜೂಜು ಎಷ್ಟು ಕೆಟ್ಟದ್ದು ಎಂಬುದನ್ನು ಅವರು ತಮ್ಮ ಭಾಷಣದಲ್ಲೇ ಒಪ್ಪಿಕೊಂಡಿದ್ದಾರೆ. ದೇಶದಲ್ಲಿ ಏನಾಗಿದೆಯೆಂದರೆ ಏನಾದರೂ ಮಾಡಿ ಹೆಚ್ಚಿಗೆ ತೆರಿಗೆಯನ್ನು ವಿಧಿಸೋಣ ಹೆಚ್ಚಿಗೆ ವರಮಾನ ಇರುವಂತೆ ಮಾಡೋಣ, ತೆರಿಗೆ ಬಾಬ್ತು ಹಾಕೋಣ ಎಂಬುದೇ ಆಗಿದೆ. ಇದರಿಂದ ನನಗನ್ನಿಸುತ್ತದೆ. ನಿಜವಾಗಿಯೂ ಸರ್ಕಾರದ ಆಡಳಿತ ದೃಷ್ಟಿಯಿಂದ ಅನುಕೂಲವೆಂದು ಭಾವಿಸಿದ್ದಲ್ಲಿ ಅಥವಾ ಇದರಿಂದ ಸರ್ಕಾರಕ್ಕೆ ಎಷ್ಟೇ ಕಷ್ಟನಷ್ಟಗಳಾದರೂ ಆಗಲಿ, ಜನರ ಹಿತದೃಷ್ಟಿಯಿಂದ ಅಂಥ ಅನ್ಯಥಾ ಭಾವನೆ ಇರಕೂಡದೆಂಬುದನ್ನು ತಾವು ಒಪ್ಪುತ್ತೀರೆಂದೇ ನಾನು ನಂಬುತ್ತೇನೆ. ಸರ್ಕಾರದ ಭಾವನೆಯಲ್ಲಿ ನಿಜವಾಗಿಯೂ ಈ ಜೂಜು ಅಷ್ಟು ಕೆಟ್ಟದ್ದೆಂಬುದಾಗಿ ಅವರ ಭಾವನೆಯಲ್ಲಿ ಕಂಡಬಂದ ಮೇಲೂ ಸಹ ಇದನ್ನು ಈ ದಿವಸ ಮೈಸೂರು ದೇಶದಲ್ಲಿ ಏತಕ್ಕೆ ಮುಂದುವರಿಸುತ್ತಿದ್ದಾರೋ ಅದರ ಅರ್ಥ ನನಗೆ ಗೊತ್ತಾಗುವುದಿಲ್ಲ. ಮೈಸೂರಿನವರು ಎಲ್ಲ ವಿಚಾರದಲ್ಲಿಯೂ ಮುಂದೆ ಹೋಗೋಣ, ಮತ್ತೊಬ್ಬರಿಗೆ ಮಾದರಿಯಾಗಿರೋಣ ಎಂದು ಹೇಳತಕ್ಕ ಸರ್ಕಾರ ಇದು ಅಷ್ಟು ಕೆಟ್ಟದ್ದೆಂದು ತಿಳಿದಿದ್ದರೂ ಕೂಡ ಈ ದಿವಸ ಇದನ್ನು ಇವರು ಏಕೆ ಮುಂದುವರಿಸಬೇಕು? ಈಗಾಗಲೇ ಇದರ ಪರವಾಗಿ ಮಾತನಾಡಿದ ಶ್ರೀ ಕೆ. ಶಾಮರಾಜಯ್ಯಂಗಾರ್ಯರು ಸರ್ಕಾರಕ್ಕೆ ಪಾನನಿರೋಧದಿಂದ ಬಹಳ ಲುಕ್ಸಾನಾಗಿದೆ, ಖರ್ಚು ಬಾಬ್ತಿಗೆ ಹಣ ಬಹಳ ಕಮ್ಮಿ ಬಿದ್ದಿದೆ. ಆ ನಷ್ಟವನ್ನು ಸರಿತೂಗಿಸಲು ಈ ತೆರಿಗೆ ವಿಧಿಸಿದ್ದಾರೆ ಇದರಿಂದ ಫಲ ಬರುತ್ತದೆ ಅನಾನುಕೂಲಕ್ಕೆ ತಕ್ಕಹಾಗೆ ಇದರಿಂದ ಕೊಂಚ ಅನುಕೂಲವಾದೀತು ಎಂದು

ಹೇಳಿದ ವಾದ ಸರಣಿಯು ಎಷ್ಟು ಅಸಂಬದ್ಧವಾಗಿದೆ. ಒಂದು ಸಲ ಜೂಜು ಬಹಳ ಕೆಟ್ಟ ಪದ್ಧತಿಯೆಂದೂ ಮತ್ತೊಂದು ಸಲ ಇದರಿಂದ ಸರ್ಕಾರಕ್ಕೆ ಕೊಂಚ ಫಲ ಬರುತ್ತದೆ ಎಂದು ಹೇಳಿದ್ದು ಬಹಳ ಅಸಂಬದ್ಧವಾಗಿ ಕಾಣುತ್ತದೆ. ಈಗ ಪಾನ ನಿರೋಧವನ್ನು 3 ಜಿಲ್ಲೆಗಳಲ್ಲಿ ಜಾರಿಗೆ ತಂದಿದೆ. ಮುಂದಕ್ಕೆ ಅದು 6 ಜಿಲ್ಲೆಗಳಿಗೆ ಬರುತ್ತದೆ. ನಂತರ 9 ಜಿಲ್ಲೆಗೂ ಪೂರ್ತಿಯಾಗಿ ಬಂದುಬಿಡುತ್ತದೆ ಎಂದು ಶ್ರೀ ಶಾಮರಾಜಯ್ಯಂಗಾರ್ಯರು ತಮ್ಮ ವಾದದಲ್ಲಿ ಸೂಚಿಸಿದ್ದಾರೆ. ಇದು ಹೇಗೆ ಸಾಧ್ಯವಾದೀತು! ಇದು ಈ ವರ್ಷ ಜಾರಿಗೆ ಬಂದರೆ ಮುಂದಿನ ವರ್ಷ ಈ ತೆರಿಗೆಯು ಹೋಗಬಹುದು. ಪಾನನಿರೋಧದಿಂದ ಉಂಟಾಗತಕ್ಕ ನಷ್ಟವನ್ನು ಈ ಜೂಜಿನ ತೆರಿಗೆಯಿಂದ ಸರಿತೂಗಿಸಬೇಕೆಂದರೆ ಇದನ್ನು ಸಾಯೋದ್ಧಾರವಾಗಿ ಇಟ್ಟುಕೊಳ್ಳಬೇಕೆಂದು ಹೇಳಿದ ಹಾಗಾಯಿತು. ಆದರೆ ಅವರು ಪಾನನಿರೋಧ ಎಷ್ಟು ಅಗತ್ಯವೊ ಈ ಜೂಜೂ ಅಷ್ಟೇ ಕೆಟ್ಟದೆಂದು ಹೇಳಿದ್ದಾರೆ. ಅವರು ಆ ರೀತಿ ಹೇಳಿರುವುದನ್ನು ನೋಡಿದರೆ "ಅಕ್ಕಿಯ ಮೇಲೆ ಆಸೆ, ನೆಂಟರ ಮೇಲೆ ಪ್ರೀತಿ" ಎಂದು ಹೇಳಿದಂತಾಗುತ್ತದೆ. ಇದು ಕೆಟ್ಟದ್ದು ಎಂದು ತಿಳಿದ ಮೇಲೆ ಸರ್ಕಾರ ಏಕೆ ಧೈರ್ಯವಾಗಿ ಇದನ್ನು ನಿಲ್ಲಿಸಬಾರದು? ಅಲ್ಲಿ ಇಂಡಿಯಾ ಸರ್ಕಾರದವರು ಮಾಡಲಿ, ನಂತರ ನಾವೂ ಇಲ್ಲಿ ಮಾಡೋಣ ಎಂದು ಹೇಳುವುದಕ್ಕೆ ಬದಲಾಗಿ ನಾವು ನಮ್ಮ ಕಾಲಿನ ಮೇಲೆ ಏಕೆ ನಿಂತುಕೊಳ್ಳಬಾರದು! ಇತರರು ಅನುಸರಿಸಿದ್ದನ್ನು ನೋಡಿ ನಾವು ಇಲ್ಲಿ ಅದೇ ರೀತಿ ಮಾಡಿದರೆ ನಮಗೆ ಅಂಥಾದ್ದರಿಂದ ಬರುವ ಗೌರವವಾದರೂ ಏನು? ಅದಕ್ಕೆ ಬದಲಾಗಿ ನಮ್ಮ ಮೇಲ್ಪಂಗ್ತಿಯನ್ನು ನೋಡಿ ಅದರಂತೆ ಇತರ ಪ್ರಾಂತೀಯ ಸರ್ಕಾರ ಮಾಡಲಿ, ಆ ಒಳ್ಳೆಯ ಹೆಸರು ನಮಗೆ ಬರಲಿ, ಹಾಗೆ ಮಾಡುವುದರಿಂದ ಏನೂ ತಲೆಕೆಳಗಾಗುವುದಿಲ್ಲ, ಅಥವಾ ಅಂಥ ವ್ಯತ್ಯಾಸವೂ ಕೂಡ ಆಗುವುದಿಲ್ಲ. ಇದನ್ನು ಕೆಟ್ಟ ಪದ್ಧತಿಯೆಂದು ತಾವು ತಿಳಿದುಕೊಂಡಿದ್ದೀರಿ. ಆದುದರಿಂದ ಇದನ್ನು ತಾವು ಹೆಚ್ಚಿಗೆ ಒತ್ತಾಯಮಾಡದೆ ವಾಪಸ್ಸು ತೆಗೆದುಕೊಳ್ಳುವುದು ಸೂಕ್ತವೆಂದು ನಾನು ಹೇಳುತ್ತೇನೆ.

ಇನ್ನು ಒಂದು ವಿಷಯವನ್ನು ಮಾತ್ರ ಈ ಸಂದರ್ಭದಲ್ಲಿ ಹೇಳಿ ಮುಗಿಸುತ್ತೇನೆ. ಈ ತೆರಿಗೆ ಹಾಕತಕ್ಕ ವಿಚಾರದಲ್ಲಿ ಶ್ರೀ ಭೂಪಾಳಂ ಆರ್ ಚಂದ್ರಶೇಖರಯ್ಯನವರು ಒಂದು ಬಹಳ ಸ್ವಾರಸ್ಯವಾದ ವಿಷಯವನ್ನು ಹೇಳಿದರು. ಅದನ್ನೇ ನಾನು ಪುಷ್ಟೀಕರಿಸುತ್ತೇನೆ. ಯಾವ ಪ್ರಜಾಸರ್ಕಾರದಲ್ಲಿಯೇ ಆಗಲಿ ಪ್ರಜೆಗಳ ಪ್ರತಿನಿಧಿಗಳೆಂದು ಯಾರನ್ನು ಕರೆಯುತ್ತೀರೊ ಅಂಥವರ ಅನುಮತಿಯನ್ನು ಪಡೆದುಕೊಳ್ಳದೆ ಮತ್ತು ಈ ವಿಚಾರಗಳನ್ನು ಅವರ ಗಮನಕ್ಕೆ ತಾರದೆ ಈ ಸಂಬಂಧವಾಗಿ ವಿಧಿಸತಕ್ಕ ಅಥವ ಹೆಚ್ಚು ಕಡಿಮೆ ಮಾಡತಕ್ಕ ಯಾವ ತೆರಿಗೆಯ ಪದ್ಧತಿಯೇ ಆಗಲಿ ಅದು ಸರ್ವಥ ಸಾಧುವಾದುದಲ್ಲವೆಂದು ಹೇಳಿ ನಾನು ಈ ಮಸೂದೆಯನ್ನು ವಿರೋಧಿಸುತ್ತೇನೆ.



**ಸಾರ್ವಜನಿಕ ರಕ್ಷಣಾ ಕಾನೂನು ಹಾಗೂ ಜನ ಬಂಧನ**

**ಸಾರ್ವಜನಿಕ ರಕ್ಷಣಾ ಕಾನೂನಿನ ಪ್ರಕಾರ ಜನರನ್ನು ಬಂಧಿಸುವ ವಿಚಾರವಾಗಿ 26.10.1949ರಂದು ಮಂಡಿಸಿದ್ದ ವಿಶೇಷ ನಿರ್ಣಯದ ಮೇಲೆ ಮಲ್ಲಣ್ಣನವರು ಮಾತನಾಡುತ್ತಾ ಸಂರಕ್ಷಣೆಯಲ್ಲಿ ಪತ್ರಿಕೆಗಳ ಪಾತ್ರವನ್ನು ಕುರಿತು ಪ್ರಸ್ತಾಪಿಸಿದ್ದಾರೆ.**

ಅಧ್ಯಕ್ಷರೇ, ಈಗ ಶ್ರೀ ಭೂಪಾಳಂ ಚಂದ್ರ ಶೇಖರಯ್ಯನವರು ಮಂಡಿಸಿರತಕ್ಕಂಥ ಈ ನಿರ್ಣಯದ ವಿಚಾರದಲ್ಲಿ ಒಂದೆರಡು ವಿಷಯಗಳನ್ನು ತಿಳಿಸಬೇಕೆಂದು ಇಷ್ಟಪಡುತ್ತೇನೆ. ಈಗ ಈ ಠರಾವಿನ ವಿಷಯದಲ್ಲಿ ನಡೆದ ಚರ್ಚೆಯ ಮೇಲೆ ಈಗ ತಾನೆ ಮಾತನಾಡಿದಂಥ ನನ್ನ ಮಾನ್ಯ ಸ್ನೇಹಿತರೂ ಮತ್ತು ಒಂದಾನೊಂದು ಕಾಲದಲ್ಲಿ ಸುಪ್ರಸಿದ್ಧ ಪತ್ರಿಕಾ ಕರ್ತರೂ ಆಗಿದ್ದ ಶ್ರೀ ಬಿ.ಎನ್. ಗುಪ್ತರವರು ಕೆಲವು ವಿಷಯಗಳನ್ನು ತಿಳಿಸಿದ್ದಾರೆ. ಮುಖ್ಯವಾಗಿ ಸರ್ಕಾರವನ್ನು ಟೀಕೆ ಮಾಡತಕ್ಕಂಥ ವಿಚಾರದಲ್ಲಿ ಒಂದು ವಿಷಯವನ್ನು ಅವರು ಸ್ಪಷ್ಟಪಡಿಸಿದ್ದಾರೆ. ಅದೇನೆಂದರೆ, ಹಿಂದೆ ವಿದೇಶೀಯರು ನಮ್ಮ ದೇಶವನ್ನು ಆಳುತ್ತಿದ್ದಾಗ ನಾವು ಮಾಡುತ್ತಿದ್ದ ಟೀಕೆಗೂ ಈಗ ನಮ್ಮವರು ಬಂದು ಆ ಸ್ಥಾನದಲ್ಲಿದ್ದಾಗ ಮಾಡತಕ್ಕಂಥ ಟೀಕೆಗೂ ಬಹಳ ವ್ಯತ್ಯಾಸವಿರಬೇಕು ಎಂಬ ಸೂಚನೆಮಾಡಿದ್ದಾರೆ. ಆದರೆ ನನ್ನ ಅಭಿಪ್ರಾಯದಲ್ಲಿ ನಮ್ಮವರು ಆಡಳಿತ ನಡೆಸತಕ್ಕ ಸಂದರ್ಭದಲ್ಲಿ ಟೀಕೆ ನಾವು ಎಷ್ಟೇ ಮಾಡಿದರೂ ಕೂಡ ಅದು ಅಪಾಯವಿಲ್ಲದ್ದು ಎನ್ನುವ ಭರವಸೆ ಅವರಿಗೆ ನಾನು ಕೊಡಬಲ್ಲೆ. ಅದೇ ಒಂದು ಸಮರದಲ್ಲಿರತಕ್ಕಂಥ ಒಂದೇ ಗುಂಪಿನ ಜನರು ಸಾಯುವರೆ? ಒಂದು ತಪ್ಪು ಮಾಡಿದರೆ, ಎಷ್ಟು ತೀಕ್ಷ್ಣವಾಗಿ ಎಷ್ಟು ವಿರೋಧವಾಗಿ ಎಷ್ಟು ಕಟುತರವಾಗಿ ಟೀಕೆ ಮಾಡಿದರೂ ಕೂಡ ಅದು ಮುಖ್ಯವಾಗಿ ಆ ಸರ್ಕಾರದ ಒಳ್ಳೆ ಸುವ್ಯವಸ್ಥಿತ ಪರಿಸ್ಥಿತಿಗಾಗಿ ಮಾಡಿದ ಟೀಕೆ ಎಂದು ಒಂದು ಒಳ್ಳೆಯ ಮನೋಭಾವದಿಂದ ಆಡಳಿತ ನಿರ್ವಹಣೆಗಾರರು ಸ್ವಾಗತಿಸಬೇಕು. ಅದೇ ರೀತಿ ಈಗ ಎಷ್ಟುಕಟುತರವಾದ ಟೀಕೆ ಮಾಡಿದರೂ ಆಡಳಿತ ನಡೆಸತಕ್ಕಂಥ

ನಮ್ಮ ಪ್ರತಿನಿಧಿಗಳು ಅದನ್ನು ಸ್ವಾಗತಿಸುತ್ತಾರೆ. ಆ ದೃಷ್ಟಿಯಿಂದ ಟೀಕೆ ಮಾಡುವುದಕ್ಕೆ ಅವಕಾಶ, ಟೀಕೆ ಮಾಡುವುದಕ್ಕೆ ಸ್ವಾತಂತ್ರ್ಯ ಇರಬೇಕಾದ್ದು ಒಳ್ಳೆಯದು ಎಂದು ನಾನು ತಿಳಿಸಲು ಇಷ್ಟಪಡುತ್ತೇನೆ.

ಇನ್ನೊಂದು ಉದಾಹರಣೆಯನ್ನು ಅವರು ಕೊಟ್ಟರು. ಹಿಂದೆ ಇದ್ದಂಥ ಸರ್ಕಾರ ಎಷ್ಟು ಪತ್ರಿಕೆಗಳಿಗೆ ಮುಟ್ಟು ಗೋಲು ಹಾಕಿತ್ತು ಎಷ್ಟು ಪತ್ರಿಕೆಗಳಿಂದ ದಂಡ ವಸೂಲುಮಾಡಿತು. ಮತ್ತು ಎಷ್ಟು ಜನರನ್ನು ಬಂಧನದಲ್ಲಿಟ್ಟಿತ್ತು ಅನ್ನುವ ವಿಷಯುವನ್ನು ಅವರು ಹೇಳಿದರು. ಆ ಸಂದರ್ಭದಲ್ಲಿ ಒಂದು ವಿಚಾರವನ್ನು ತಿಳಿಸುತ್ತೇನೆ. ಹಿಂದೆ ಇದ್ದುದು ಜವಾಬ್ದಾರಿ ಇಲ್ಲದೇ ಇದ್ದ ಸರ್ಕಾರ ಎಷ್ಟು ತಪ್ಪು ಮಾಡಿದ್ದರೂ ಸಹ ಈ ದಿವಸ ಜವಾಬ್ದಾರಿಯನ್ನು ಹೊಂದಿರತಕ್ಕ ಅಧಿಕಾರವರ್ಗ, ಮಂತ್ರಿಮಂಡಳ ಸಾವಿರ ತಪ್ಪು ಮಾಡಿದರೆ ನೂರು ಜನ ಅಪರಾಧಿಗಳನ್ನು ಶಿಕ್ಷೆ ಮಾಡದೆ ಬಿಟ್ಟರೆ ಅದು ಮಹಾ ದೋಷವಲ್ಲ. ಆದರೆ ಒಬ್ಬ ನಿರಪರಾಧಿಯನ್ನು ನೀವು ಈ ದಿವಸ ಶಿಕ್ಷೆ ಮಾಡಿದರೆ ಅದು ಹಿಂದಿನ ಸರ್ಕಾರ ಒಂದು ಲಕ್ಷ ಜನರನ್ನು ಶಿಕ್ಷೆ ಮಾಡಿದ್ದರೆ ಅದಕ್ಕಿಂತ ಹೆಚ್ಚಿನದು ಅದಕ್ಕೆ ಸಮಾನವಾದುದಲ್ಲ. ಆ ವಿಚಾರದಲ್ಲಿ ಸರ್ಕಾರದ ನೀತಿಯ ಮೇಲೆ ಟೀಕೆ ಮಾಡುವ ಅಧಿಕಾರ ನಮಗಿದೆ ಎಂಬುದನ್ನು ನಮ್ಮ ಮಿತ್ರರಿಗೆ ತಿಳಿಸಲು ಇಷ್ಟಪಡುತ್ತೇನೆ.

ಇನ್ನೊಂದು ವಿಷಯ, ಈಗ ನಮ್ಮ ದೇಶದಲ್ಲಿ ಪತ್ರಿಕೆಗಳು ಎಷ್ಟುಮಟ್ಟಿಗೆ ಜನ ಜಾಗೃತಿಯನ್ನು ಉಂಟು ಮಾಡುತ್ತಿವೆ ಅನ್ನತಕ್ಕ ವಿಷಯ ಬಹಳ ವರ್ಷಗಳಿಂದ ಎಲ್ಲರಿಗೂ ತಿಳಿದಿರತಕ್ಕ ವಿಷಯವೇ ಆಗಿದೆ. ನಮ್ಮ ದೇಶದಲ್ಲಿರುವ ಪತ್ರಿಕೆಗಳಂತೆಯೇ ಇತರೆ ನಮ್ಮ ಅಕ್ಕ ಪಕ್ಕದ ದೇಶಗಳಲ್ಲೂ ಸಹಸ್ರಾರು ಪತ್ರಿಕೆಗಳಿವೆ. ಉದಾಹರಣೆಗೆ ಬೊಂಬಾಯಿ ಮತ್ತು ಮದರಾಸು ಅಧಿಪತ್ಯಗಳನ್ನು ತೆಗೆದುಕೊಳ್ಳೋಣ, ಈಗ ಬೊಂಬಾಯಿ ಅಧಿಪತ್ಯದಲ್ಲಿರುವ ಪತ್ರಿಕೆಗಳು ಎಷ್ಟು ಮಟ್ಟಿಗೆ ಆಡಳಿತವನ್ನು ನಡೆಸುವ ಸರ್ಕಾರವನ್ನು ಟೀಕೆ ಮಾಡುತ್ತಿವೆಯೆಂಬುದನ್ನು ತಮ್ಮಲ್ಲನೇಕರು ಚೆನ್ನಾಗಿ ಮನಗಂಡಿದ್ದೀರೆಂಬುದು ನನಗೆ ಗೊತ್ತು. ಆ ಸರ್ಕಾರದವರು ಎಷ್ಟು ಮಟ್ಟಿಗೆ ಸ್ವಾಗತವನ್ನು ಟೀಕೆಗಳಿಗೆ ನೀಡುತ್ತಿದ್ದಾರೆ. ಅಂಥಾದ್ದರಲ್ಲಿ ತಾವೇಕೆ ಟೀಕೆಗಳಿಗೆ ಭಯಪಡಬೇಕೋ ಏನೋ ನನಗೆ ಅರ್ಥವಾಗುವುದಿಲ್ಲ. ಒಂದು ಪತ್ರಿಕೆಯಲ್ಲಿ ಒಂದು ವೇಳೆ ತಪ್ಪಾದ ಟೀಕೆ ಬಂದರೆ ನಮ್ಮ ಪಬ್ಲಿಸಿಟಿ ಆಫೀಸರಿದ್ದಾರೆ ದೊಡ್ಡ ದೊಡ್ಡ ಸಂಬಳ ಕೊಟ್ಟ ಅಧಿಕಾರಿಗಳನ್ನಿಟ್ಟು ಕೊಂಡಿದ್ದೀರಿ. ವಿಶೇಷ ಸಿಬ್ಬಂದಿ, ಸಲಕರಣೆ ಇದೆ. ಸರ್ಕಾರಕ್ಕೆ ವಿರುದ್ಧವಾದ ಪ್ರಕಟಣೆಯನ್ನು ಈ ದಿವಸ ಹೊರಡಿಸಿದರೆ ಅದಕ್ಕೆ ತಕ್ಕ ಕ್ರಮ ತೆಗೆದುಕೊಳ್ಳುವುದಕ್ಕೆ ನಿಮಗೆ ಅವಕಾಶವಿಲ್ಲವೆ?

**ಉಪಾಧ್ಯಕ್ಷರು** – ಒಬ್ಬರು ತುಚ್ಛವಾದ ಶಬ್ದವನ್ನು ಉಪಯೋಗಿಸಿದರೆ ಅದಕ್ಕೆ ನಾವು ಜವಾಬಾಗಿ ಪ್ರತಿ ಹೇಳುವುದಕ್ಕಾಗುತ್ತದೆಯೇ?

**ಶ್ರೀ ಎಸ್.ಸಿ. ಮಲ್ಲಯ್ಯನವರು** – ಖಂಡಿತವಾಗಿಯೂ ಆ ತರಹ ಭಾವನೆಯಿಂದ ಹೇಳಬೇಕೆಂದು ಯಾರಿಗೂ ಇಷ್ಟವಿಲ್ಲ. ಆದರೆ ನೀವು ಕಾನೂನು ಪ್ರಕಾರ ವರ್ತನೆ ಮಾಡಿಲ್ಲ.

**ಉಪಾಧ್ಯಕ್ಷರು** – ಅದರ ಪ್ರಕಾರವೇ ಮಾಡಿದ್ದೇವೆ.

**ಶ್ರೀ ಎಸ್.ಸಿ. ಮಲ್ಲಯ್ಯನವರು** – ಯಾವಾಗಲೂ ನಿಮ್ಮ ಕಾನೂನಿನಲ್ಲಿ ಎಷ್ಟು ಹೇಳಿದರೂ, ಅದಕ್ಕೆ ವಿನಾಯಿತಿ ಕೊಡತಕ್ಕ ವಿಷಯದಲ್ಲಿ ನಿಮಗೆ ಅಧಿಕಾರವಿದ್ದರೂ ಕೂಡ, ಅದನ್ನು ಮಾಡದೆ, ಅಥವಾ ಕೋರ್ಟು ಮೂಲಕವಾದರೂ ಅಂಥವರಮೇಲೆ ವ್ಯವಹಾರ ನಡೆಸಿದ್ದರೆ ನಿಮ್ಮ ಕೀರ್ತಿ ಹೆಚ್ಚಿ ಸರ್ಕಾರದ ಗೌರವವೂ ಹೆಚ್ಚಾಗುತ್ತಿತ್ತೆಂದು ನಾನು ತಿಳಿಸಲು ಇಷ್ಟಪಡುತ್ತೇನೆ. ಹಾಗಿದ್ದು ಸಹ ತಾವು ಏಕೆ ಈ ರೀತಿ ದುಡುಕಿ ಇಂಥಾದ್ದಕ್ಕೆ ಕೈಹಾಕಿದಿರೋ ಅದು ನನಗೆ ಅರ್ಥವಾಗುವುದಿಲ್ಲ. ನಾನಾಗಲೇ ತಿಳಿಸಿದ ರೀತಿಯಲ್ಲಿ ತಾವು ಕಾನೂನು ಪ್ರಕಾರ ಕೋರ್ಟಿಗೆ ಹಾಕಿ ಬಂದೋಬಸ್ತು ಮಾಡಿ, ಅದರಿಂದ ಯಾರಿಗೂ ಸಂಕಟವಾಗಲಿ ದುಃಖವಾಗಲಿ ಆಗುವುದಿಲ್ಲ. ನಾನಾಗಲೇ ತಿಳಿಸಿರುವ ಹಾಗೆ ತಪ್ಪು ಮಾಡಿದ ನೂರು ಜನರನ್ನು ಶಿಕ್ಷೆ ಮಾಡದೆ ಬಿಟ್ಟರೂ ಪಾಪವಿಲ್ಲ, ಆದರೆ ನಿರಪರಾಧಿಯಾದ ಒಬ್ಬ ಮನುಷ್ಯನನ್ನು ಶಿಕ್ಷೆಗೆ ಗುರಿಪಡಿಸುವುದು ಹೆಚ್ಚುವ್ಯಥೆಯನ್ನುಂಟು ಮಾಡುವುದಾಗಿ ನಮಗೆ ಕಂಡು ಬರುತ್ತದೆ. ತಾವು ಈ ವಿಚಾರದಲ್ಲಿ ದೊಡ್ಡ ಮನಸ್ಸು ಮಾಡಬೇಕೆಂದು ನಾನು ಸೂಚಿಸುತ್ತೇನೆ. ಹಾಗೆ ಮಾಡದೆ ಜನರನ್ನು ಸುಮ್ಮನೆ ಬಂಧನದಲ್ಲಿಡತಕ್ಕ ವಿಷಯ ಬಹಳ ಖಂಡನೀಯವಾದುದು. ಆದರೆ ನಾನು ಇದರ ಮೇಲೆ ಅಷ್ಟು ಹೆಚ್ಚಾಗಿ ಮಾತನಾಡಲು ಇಷ್ಟಪಡುವುದಿಲ್ಲ. ಯಾವ ಒಬ್ಬ ಮನುಷ್ಯನೇ ಆಗಲಿ, ದೇಶದಲ್ಲಿರತಕ್ಕವರೆಲ್ಲರೂ ಶ್ರೀಮನ್ಮಹಾ ರಾಜರವರ ಪ್ರಜೆಗಳಾಗಿದ್ದು, ಅವರಿಗಿರತಕ್ಕ ಸ್ವಾತಂತ್ರ್ಯತೆಗೆ ಧಕ್ಕೆ ಬರುವ ರೀತಿಯಲ್ಲಿ ತಾವು ತಮ್ಮ ವಿಶೇಷಾಧಿಕಾರವನ್ನು ಉಪಯೋಗಿಸುತ್ತಿದ್ದೀರಿ. ತಾವು ಯಾವ ಕ್ರಮವನ್ನು ನ್ಯಾಯವಾಗಿ ಅನುಸರಿಸಬಹುದಿತ್ತೋ ಅದನ್ನು ತಾವು ಅನುಸರಿಸಿಲ್ಲ. ಹಾಗೆ ಏನಾದರೂ ಮಾಡಬೇಕೆಂಬ ಇಚ್ಛೆ ತಮಗಿದ್ದರೆ ಅದನ್ನು ಕೋರ್ಟುಮೂಲಕ ನಡೆಸಿ ಅವರಿಗೆ ಶಿಕ್ಷೆ ಮಾಡಿಸಿದರೆ ಅದಕ್ಕೆ ಯಾರೂ ದುಃಖವನ್ನಾಗಲಿ ವ್ಯಥೆಯನ್ನಾಗಲಿ ಪಡುವುದಿಲ್ಲ. ಎಲ್ಲಾ ಸರ್ಕಾರಗಳೂ ಈ ರೀತಿ ಜನರಿಗೂ, ಸರ್ಕಾರಕ್ಕೂ ಒಂದು ಸಮಾನತೆ, ಸಮರಸತೆ, ಸೌಹಾರ್ದಗಳುಂಟಾಗತಕ್ಕ ಮಾರ್ಗವನ್ನು ಅನುಸರಿಸುವ ಕಾಲ ಬಂದಿದೆ. ಆದುದರಿಂದ ತಾವೂ ಸಹ ಅಂತಹ ಸೌಹಾರ್ದ, ಸಮರಸ ಉಂಟಾಗುವಂತೆ ವರ್ತಿಸಬೇಕೆಂದು ಸೂಚಿಸಿ ನಾನು ಈ ಠರಾವನ್ನು ಅನುಮೋದಿಸುತ್ತೇನೆ.



## ಆ ಕಾಲದ ಬಜೆಟ್ ಭಾಷಣಗಳು

**ರಾಜ್ಯದ ಆರ್ಥಿಕ ಅಭಿವೃದ್ಧಿ ಮತ್ತು ಒಂದು ನೇರನೋಟ ಇರಿಸಿಕೊಂಡೇ ಯಾವಾಗಲೂ ಮಲ್ಲಯ್ಯನವರು ವ್ಯವಸ್ಥೆಯ ಬಲವರ್ಧನೆಗೆ ಒತ್ತು ನೀಡುತ್ತಿದ್ದರೆಂಬುದು ಅವರ ಬಜೆಟ್ ಮೇಲಿನ ಭಾಷಣ, ಚರ್ಚೆಗಳಿಂದ ತಿಳಿದು ಬರುತ್ತದೆ. ನಿರಂತರ ಎರಡೂವರೆ ದಶಕಗಳಿಗೂ ಹೆಚ್ಚು ಕಾಲ ಪ್ರಜಾಪ್ರತಿನಿಧಿ ಸಭೆಯ ಪ್ರಮುಖ ಸದಸ್ಯರಾಗಿ, ಎರಡು ಅವಧಿಗೆ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ಅವರು ರಾಜ್ಯದ ಆಯವ್ಯಯ ವಹಿವಾಟನ ಮೇಲೆ ಮಂಡಿಸಿದ ಚಿಂತನೆ. ಮಂಥನಗಳು ಅದೆಷ್ಟೋ ಅಧಿವೇಶನ ಕಲಾಪಗಳು ಅವನ್ನೆಲ್ಲ ಪ್ರತಿಬಿಂಬಿಸುವ ಕನ್ನಡಿಯಂತೆ ಇಲ್ಲಿ ಹಲವು ಬಜೆಟ್ ಭಾಷಣಗಳನ್ನು ನೀಡಲಾಗಿದೆ.**

### ಪ್ರತಿಪ್ರಜೆಗೂ ಅನ್ನಬಟ್ಟೆ ವಿದ್ಯೆ ವೈದ್ಯ

ಮಾನ್ಯ ಅಧ್ಯಕ್ಷರೇ, ಈ ದಿವಸ ನಮ್ಮ ಮುಂದೆ ಇಟ್ಟಿರತಕ್ಕ ಈ ಆಯವ್ಯಯದ ಪಟ್ಟಿಯು ಬಹಳಮಟ್ಟಿಗೆ ನಿರಾಶಾದಾಯಕವಾಗಿದೆಯೆಂಬುದನ್ನು ತಿಳಿಸಲು ಬಹಳ ವಿಷಾದಪಡುತ್ತೇನೆ. ಈಗ ಮಂಡಿಸಿರುವ ಬಡ್ಜೆಟ್ ಹಣವಂತರ ಬಡ್ಜೆಟ್ ಆಗಿದೆಯೇ ಹೊರತು ಬಡ ಮನುಷ್ಯರ ಹಿತರಕ್ಷಣೆ ಮಾಡತಕ್ಕ ಬಡ್ಜೆಟ್ಟಾಗಿಲ್ಲವೆಂದು ನಾನು ತಿಳಿಸಬೇಕಾಗಿದೆ. ನನಗೆ ಜ್ಞಾಪಕವಿದ್ದ ಹಾಗೆ ನಾನೀಗ ನೋಡುತ್ತಿರುವುದು 27ನೆಯ ಬಡ್ಜೆಟ್ ಪಟ್ಟಿ ಎಂದು ಹೇಳಿದರೂ ಹೇಳಬಹುದು. ಆದರೆ ಈ ಹಿಂದಿನ ವರ್ಷಗಳ ಬಡ್ಜೆಟ್ಟುಗಳನ್ನು ನೋಡಿದರೆ, ಹಿಂದಿನದಕ್ಕೂ ಮತ್ತು ಈಗ ಸಭೆಯ ಮುಂದಿರುವುದಕ್ಕೂ ಸ್ವಲ್ಪ ಕೂಡ ವ್ಯತ್ಯಾಸವಿದ್ದ ಹಾಗೆ ನನಗೆ ಕಾಣುತ್ತಿಲ್ಲ. ಸ್ವಲ್ಪಮಟ್ಟಿಗೆ ಅಂಕಿ ಅಂಶಗಳಲ್ಲಿ ಅಲ್ಲಲ್ಲೆ ಕೆಲವು ಚಿಕ್ಕ ಪುಟ್ಟ ಬದಲಾವಣೆಗಳ ವಿನಹ ಮೂಲಭೂತವಾದ ವಿಷಯಗಳು ಎಳ್ಳೆಷ್ಟಾದರೂ ಬದಲಾವಣೆಯಾಗಿಲ್ಲವೆಂಬುದು.

ಅಲ್ಲದೆ ಈ ದಿವಸ ಮಂತ್ರಿ ಮಂಡಲದಲ್ಲಿ ತೋರುತ್ತದೆ ಕುಳಿತು ಪ್ರಜೆಗಳ ಜವಾಬ್ದಾರಿ ಹೊತ್ತುಕೊಂಡು ತಕ್ಕಂಥಾ ಬಡ್ಜೆಟ್ ಸಹ ಈ ರೀತಿಯಾಗಿದೆಯಲ್ಲ ಎಂಬುದಕ್ಕೆ ನಾನು ಬಹಳ ಶಂಕೆ ಪಡಬೇಕಾಗಿದೆ. ಮುಖ್ಯವಾಗಿ ಬಡ್ಜೆಟ್ಟಿನ ಲಕ್ಷಣ ಯಾವ ರೀತಿ ಇರಬೇಕೆಂದು ಮುಖ್ಯವಾಗಿ ಈ ದಿನದ ಮೈಸೂರು ದೇಶದಲ್ಲಿರತಕ್ಕ ಪ್ರತಿಯೊಬ್ಬ ಪ್ರಜೆಗೂ ಅನ್ನ, ಬಟ್ಟೆ, ವಿದ್ಯೆ ಮತ್ತು ವೈದ್ಯಸಹಾಯ ಇವುಗಳನ್ನು ಒದಗಿಸುವುದಕ್ಕೆ ಅನುಗುಣವಾಗಿರಬೇಕು. ಇವು ಮುಖ್ಯವಾಗಿ ನಿಜವಾಗಿ ಪ್ರಜಾ ಸರ್ಕಾರ ಕೂಡಬೇಕಾಗಿರುವಂಥವುಗಳು. ಆದರೆ ಈ ಬಡ್ಜೆಟ್ಟಿನಲ್ಲಿ ಅಂಥಾದ್ದು ಯಾವುದೂ ಅಡಕವಾಗಿಲ್ಲ.

ಈ ಆಯವ್ಯಯದ ಪಟ್ಟಿಯ ವಿಚಾರವಾಗಿ ನಾನಿನ್ನು ಎರಡಂಶಗಳನ್ನು ಜಾಗ್ರತೆಯಾಗಿ ತಿಳಿಸಿ ನನ್ನ ಭಾಷಣವನ್ನು ಮುಕ್ತಾಯ ಮಾಡುತ್ತೇನೆ.

ಎರಡನೆಯದಾಗಿ, ವಿದ್ಯಾಭ್ಯಾಸದ ವಿಷಯದಲ್ಲಿ ತಾವೇನು ಮಾಡುತ್ತೀರೆಂಬುದನ್ನು ನೋಡೋಣ. ಸುಮಾರು 275 ಲಕ್ಷ ರೂಪಾಯಿಗಳನ್ನು ತಾವು ಕೊಟ್ಟಿದ್ದೀರಿ, ನಿಜ. ಹೊರಗಡೆಯವರು ಇದನ್ನು ನೋಡಿ ಮೈಸೂರಿನವರು ತಮ್ಮ ಬಡ್ಜೆಟ್ಟಿನಲ್ಲಿ ಕಾಲು ಭಾಗವನ್ನೇ ವಿದ್ಯಾಭ್ಯಾಸಕ್ಕೆ ಕೊಡುತ್ತಿದ್ದಾರೆಂಬ ಭಾವನೆಯನ್ನುಂಟುಮಾಡುವುದಕ್ಕೆ ಮಾತ್ರ ಆಗಿದೆಯೇ ಹೊರತು ಖಂಡಿತವಾಗಿಯೂ ರೈತರ ದೃಷ್ಟಿಯಿಂದ ಸರ್ಕಾರದವರು ಯಾವ ಅನುಕೂಲವನ್ನೂ ಮಾಡಿಲ್ಲವೆಂದು ಹೇಳಬಹುದು. ತಾವು ಏನು ತಾನೆ ಅತಿಶಯವಾಗಿ ಮಾಡಿದ್ದೀರಿ! ವಿದ್ಯಾಭ್ಯಾಸಕ್ಕೆ ಕೊಟ್ಟಿರುವ 275 ಲಕ್ಷ ರೂಪಾಯಿಗಳಿಂದ ವಿಶ್ವವಿದ್ಯಾನಿಲಯಕ್ಕೆ ಒಂದಕ್ಕೆರಡರಷ್ಟು ಗ್ರ್ಯಾಂಟು ಜಾಸ್ತಿ ಮಾಡಿದ್ದಾಯಿತೇ ಹೊರತು, ತಮಗೆ ಗೊತ್ತಿರುವ ಹಾಗೆ ಮೈಸೂರು ದೇಶದಲ್ಲಿ ಪ್ರೈಮರಿ ಸ್ಕೂಲುಗಳೇನಾದರೂ ಜಾಸ್ತಿ ಮಾಡಿದ್ದೀರಾ! ತಾವು ಒಂದು ವಿದ್ಯಾಭ್ಯಾಸದ ತೆರಿಗೆಯನ್ನು ರೈತರಿಗೆ ವಿದ್ಯಾಭ್ಯಾಸವನ್ನು ಕೊಡುತ್ತೇವೆಂಬ ಭರವಸೆಯ ಮೇಲೆ ಸುಮಾರು 20 ವರ್ಷಗಳಿಂದಲೂ ಹಳ್ಳಿಯವರಿಂದ ವಸೂಲು ಮಾಡುತ್ತಿದ್ದೀರಿ. ಇವತ್ತಿನವರೆಗೂ ಒಂದು ಪ್ರೈಮರಿ ಪಾಠಶಾಲೆಯೂ ಇಲ್ಲದ ಸಹಸ್ರಾರು ಗ್ರಾಮಗಳು ತಮಗೆ ತೆರಿಗೆ ಕೊಡುತ್ತಿವೆ. ಇದು ಧರ್ಮವೇ! ಹೀಗೆ ವಸೂಲು ಮಾಡುವುದಕ್ಕೆ ಸರ್ಕಾರದವರಿಗೆ ನಿಜವಾಗಿಯೂ ಅಧಿಕಾರವಿದೆಯೇ ಎಂಬುದನ್ನು ಯೋಚನೆ ಮಾಡಬೇಕು. ತಾವು ಯಾವಾಗ ಒಂದು ಗೊತ್ತಾದ ಕಾರ್ಯಕ್ಕಾಗಿ ತೆರಿಗೆಯನ್ನು ವಸೂಲು ಮಾಡುತ್ತಿದ್ದೀರೋ ಆ ತೆರಿಗೆಯಿಂದ ಆ ಸ್ಥಳದಲ್ಲೆಲ್ಲಾ ಮೊದಲು ಒಂದು ಪ್ರೈಮರಿ ಪಾಠಶಾಲೆಯನ್ನು ಏರ್ಪಡಿಸಸುವುದು ಮುಖ್ಯ. ಈಗಿನ ಬಡ್ಜೆಟ್ಟನ್ನು ನೋಡಿದರೆ, ತಾವು ಹೋದ ವರ್ಷಕ್ಕೂ ಈ ವರ್ಷಕ್ಕೂ 10 ಲಕ್ಷ ರೂಪಾಯಿಗಳನ್ನು ಜಾಸ್ತಿ ಕೊಟ್ಟಿದ್ದೀರಿ. ಆ ಹತ್ತು ಲಕ್ಷ ರೂಪಾಯಿಗಳೂ ಕೂಡ ತುಟ್ಟಿ ಭತ್ಯೆಕ್ಕೂ, ಕಟ್ಟಡಗಳಿಗೂ ಮತ್ತು ನಾಲ್ಕೈದು ಸ್ಕೂಲುಗಳನ್ನು ಏರ್ಪಡಿಸುವುದಕ್ಕಾಗಿಯೂ ಆಗಿವೆಯೇ ಹೊರತು ಮತ್ತೇನೂ ಇಲ್ಲ.

ಈ ಪರಿಸ್ಥಿತಿಯಲ್ಲಿ ಇನ್ನು ಹತ್ತು ವರ್ಷಗಳಾದರೂ ಕೂಡ ಎಲ್ಲೆಲ್ಲಿ ಸ್ಕೂಲುಗಳಿಲ್ಲವೋ ಅಲ್ಲಿಗೆಲ್ಲಾ ಕೊಡುವುದಕ್ಕೆ ನಿಮಗೆ ಸಾಧ್ಯವಾಗುವುದಿಲ್ಲ. ಯಾವ ಪ್ರಜಾ ಸರ್ಕಾರದ ಕರ್ತವ್ಯವೇನಿರಬೇಕೆಂಬುದಿದೆಯೋ ಅದರಂತೆ ನಿರ್ಬಂಧ ವಿದ್ಯಾಭ್ಯಾಸವನ್ನು ಪ್ರತಿಯೊಬ್ಬ ಶಾಲೆಯ ವಯಸ್ಸಿನ ಮಗುವಿಗೂ ವಿದ್ಯಾಭ್ಯಾಸದ ಅನುಕೂಲತೆಯನ್ನು ಒದಗಿಸಿ ಕೊಡುವುದಕ್ಕೆ ಈ ಬಡ್ಜೆಟ್ಟು ಎಷ್ಟು ಮಾತ್ರವೂ ಸಾಧಕವಾಗಿಲ್ಲ. ಈ ಕರ್ತವ್ಯ ನಿರ್ವಹಣೆಯಲ್ಲಿ ತಾವು ಎಷ್ಟರ ಮಟ್ಟಿಗೆ ಪ್ರಯತ್ನ ಮಾಡುತ್ತಿದ್ದೀರೆಂಬುದನ್ನು ನೋಡುವುದಾದರೆ, ನಿಜವಾಗಿಯೂ ಹಿಂದಿನ ಸರ್ಕಾರದ ಪದ್ಧತಿಗೂ ಇಂದಿನ ಸರ್ಕಾರದ ಪದ್ಧತಿಗೂ ಏನೇನೂ ವ್ಯತ್ಯಾಸಕಾಣಬರುವುದಿಲ್ಲ. ಆದ್ದರಿಂದ ಈ ವಿಷಯದಲ್ಲಿ ನನಗಂತೂ ಈ ಬಡ್ಜೆಟ್ಟು ಬಹಳ ನಿರಾಶಾದಾಯಕವಾಗಿದೆ. ಸರ್ಕಾರದವರು ಈಗಲಾದರೂ ತಮ್ಮ ಜವಾಬ್ದಾರಿಯನ್ನರಿತುಕೊಂಡು ದೇಶದಲ್ಲಿ ತಮ್ಮ ಜವಾಬ್ದಾರಿಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಆದಷ್ಟು ಕ್ಷಿಪ್ರದಲ್ಲಿಯೇ ಏರ್ಪಡಿಸಬೇಕೆಂದು ಸಲಹೆ ಮಾಡುತ್ತೇನೆ.

ಮತ್ತೊಂದು ವಿಷಯ. ಹಿಂದೆ ಅನೇಕ ಸಲ ಈ ಸಭೆಯಲ್ಲೂ ಬೇರೆ ಕಡೆಯಲ್ಲೂ ಅನೇಕ ವಿಧಗಳಲ್ಲಿ ಸರ್ಕಾರದವರ ಮುಂದೆ ಹೇಳಿದ್ದೇವೆ. ಏನೆಂದರೆ, ನಮ್ಮ ದೇಶದಲ್ಲಿ ರೈತರ ಋಣಭಾಧ ಬಹಳ ಹೆಚ್ಚಾಗಿದೆ. ಮೈಸೂರು ದೇಶದ ರೈತನು ಈ ಹೊರಲಾರದ ಹೊರೆಯನ್ನು ಹೊರುತ್ತಿದ್ದಾನೆಂದು ಟೀಕೆ ಮಾಡುತ್ತಿದ್ದೆವು. ಇವತ್ತಿನ ದಿವಸದ ಬಡ್ಜೆಟ್ಟಿನಲ್ಲಿ ಈ ಮಾರ್ಗದಲ್ಲೇನಾದರೂ ಕಾರ್ಯಕ್ರಮ ಕೈಗೊಂಡಿದ್ದಾರೆಯೇ ಎಂದು ನೋಡಿದರೆ ಏನೂ ಇಲ್ಲವೆಂಬುದು ವ್ಯಕ್ತಪಡುತ್ತದೆ. ಇದನ್ನು ನೋಡಿದರೆ ಸರ್ಕಾರದವರಿಗೆ ಬಡವರ ಹಿತ ಚಿಂತನೆಯೇನ್ನಾದರೂ ಇದೆಯೇ ಎಂಬುದರಲ್ಲಿ ಸಂಶಯವಿದೆ. ಈ ವಿಷಯದಲ್ಲಿ ಕೂಡ ಬಡ್ಜೆಟ್ಟು ತೃಪ್ತಿಕರವಾಗಿಲ್ಲ. ಈಗಲಾದರೂ ಸರ್ಕಾರದವರು ಆದಷ್ಟು ಮಟ್ಟಿಗೆ ಸೂಕ್ತ ಕಾರ್ಯಕ್ರಮವನ್ನು ಕೈಗೊಳ್ಳಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಎರಡನೆಯದಾಗಿ, ಬಡ್ಜೆಟ್ಟಿನಲ್ಲಿ ಯಾವ ಪರಿಹಾರವನ್ನೂ ಕಲ್ಪಿಸಿಲ್ಲ. ಅದಕ್ಕಾಗಿ ತಾವು ಖಂಡಿತವಾಗಿಯೂ ಏರ್ಪಾಡು ಮಾಡಬೇಕೆಂದು ಹೇಳುತ್ತೇನೆ.

ಮೂರನೆಯದಾಗಿ, ಇವತ್ತಿನ ದಿವಸ ಜನ ಸಾಮಾನ್ಯರ ಮೇಲಿನ ಹೊರೆ ಎಷ್ಟರಮಟ್ಟಿಗಿದೆಯೆಂಬುದನ್ನು ತಾವು ನೋಡುವುದಾದರೆ, ಕಳೆದ ವರ್ಷ ಈ ದಿವಸದಲ್ಲಿದ್ದುದಕ್ಕಿಂತಲೂ ಈಗ ಪರಿಸ್ಥಿತಿ ಬಹಳ ಉತ್ಕಟವಾಗಿದೆಯೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಹೋದ ವರ್ಷಕ್ಕಿಂತಲೂ ಈ ವರ್ಷ ರೈಲ್ವೆ ಚಾರ್ಜನ್ನು ಜಾಸ್ತಿ ಮಾಡಿದ್ದೀರಿ, ಸಕ್ಕರೆ ಮೇಲಿನ ಬೆಲೆಯನ್ನು ಜಾಸ್ತಿ ಮಾಡಿದ್ದೀರಿ!

ಬಟ್ಟೆ, ಹೊಗೆ ಸೊಪ್ಪು, ಕಾಫಿ, ಟೀ ಮುಂತಾದ ಅನೇಕ ಪದಾರ್ಥಗಳ ಮೇಲೆ ಸುಂಕ ವಿಧಿಸಿ ಜನ ಸಾಮಾನ್ಯರಲ್ಲಿ ಅನುಕೂಲಸ್ಥರಾಗಿ ಈ ಹೊರೆ ಹೊರುವುದಕ್ಕೆ ಶಕ್ತರಾಗಿರುವವರಿಗೆ

ತೊಂದರೆಯಾಗಿರುವಾಗ ಬಡಬಗ್ಗರಿಗೆ ಜೀವನ ನಡೆಸುವುದಕ್ಕೆ ಎಷ್ಟು ಕಷ್ಟವಾಗಿದೆಯೆಂದು ಹೇಳಬೇಕಾಗಿಲ್ಲ. ಆದ್ದರಿಂದ ಆ ದೃಷ್ಟಿಯಿಂದ ಕೂಡ ಅವು ಜನ ಸಾಮಾನ್ಯರ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದಕ್ಕೆ ಈ ಬಡ್ಜೆಟ್ಟು ಅನುಕೂಲವಾಗಿಲ್ಲವೆಂದು ನಾನು ತಿಳಿಸುತ್ತೇನೆ.

ಭಡ್ಜೆಟ್ಟಿನಲ್ಲಿ ಇನ್ನೇನು ಮುಖ್ಯವಾಗಿ ಕಾಣತ್ತದೆಂದರೆ, ತಾವು ವಿಶೇಷವಾಗಿ ಖರ್ಚು ಮಾಡಿರುವುದೆಲ್ಲಾ ಪೋಲೀಸ್ ಮಿಲಿಟರಿ, ಜೈಲು ಮುಂತಾದ ಬಾಬ್ತುಗಳಿಗೆಂದು ಕಾಣುತ್ತದೆ. ಇವುಗಳನ್ನು ತಾವು ಬಹಳ ಸುರಕ್ಷಿತವಾದ ರೀತಿಯಲ್ಲಿ ನೋಡಿಕೊಂಡಿರುವಂತೆ ಕಾಣುತ್ತದೆ. ಜೈಲು ಬಾಬ್ತಿಗೆ 1945–46ರಲ್ಲಿ $2^1/_2$ ಲಕ್ಷ ರೂಪಾಯಿ ಖರ್ಚಾಗುತ್ತಿದ್ದುದು, ಈ ಸಾರಿ $6^3/_4$ ಲಕ್ಷ ರೂಪಾಯಿಗಳನ್ನು ಒದಗಿಸಿದ್ದೀರಿ! ಮಿಲಿಟರಿ ಬಾಬಿಗೆ 23 ಲಕ್ಷ ರೂಪಾಯಿಗಳನ್ನು ಕೊಡಲಾಗುತ್ತಿತ್ತು, ಈಗ 83 ಲಕ್ಷ ರೂಪಾಯಿಗಳನ್ನು ಒದಗಿಸಿದ್ದೀರಿ!!

ಆದರೆ, ರಕ್ಷಣೆ ಬೇಕೆಂದು ಹೇಳಿ ಬೊಕ್ಕಸವನ್ನೇ ಕೊಡುವುದೇ? ಯಾವ ಸರ್ಕಾರಕ್ಕಾದರೂ ರಕ್ಷಣೆ ಇರಬೇಕು, ವಾಸ್ತವ. ಆದರೆ ಯಾವ ರಕ್ಷಣೆ! ಇಡೀ ಮೈಸೂರು ದೇಶದ 78ಲಕ್ಷ ಪ್ರಜೆಗಳ ಹಿತಸಾಧನೆಗೆ ಅನುಕೂಲವಾದ ರಕ್ಷಣೆ. ಬರೀ ಸಂಬಳ ಕೊಟ್ಟು ಪೋಲೀಸು, ಮಿಲಿಟರಿ ರಕ್ಷಣೆ ನಂಬಿ ಕೊಂಡಿರತಕ್ಕ ಸರ್ಕಾರ ಎಂದಿಗೂ ಉಳಿಯುವುದಿಲ್ಲವೆಂಬುದು ತಮಗೇ ಗೊತ್ತಿದೆ. ಆದ್ದರಿಂದ ಹಿಂದಿನ ಸರ್ಕಾರ ಯಾವ ರೀತಿ ಮಾಡಿತು. ಅದಕ್ಕೇನು ಗತಿಯಾಯಿತೆಂಬುದು ತಮಗೆ ಗೊತ್ತಿದೆ. ಇಡೀ ಮೈಸೂರು ದೇಶದ ಜನ ರಕ್ಷಣೆಯನ್ನು ಅಪೇಕ್ಷೆ ಮಾಡಿ, ಅವರ ಹಿತವನ್ನು ಸಂಪಾದನೆ ಮಾಡಬೇಕೇ ಹೊರತು, ಇಂಥ ಮಿಲಿಟರಿ ಪೋಲೀಸು ಸಿಬ್ಬಂದಿಗಳಿಂದ ನಮ್ಮ ಒಳಭಾಗದ ರಕ್ಷಣೆಯಾಗಲಾರದು. ನಮಗೆ ಏನಿದ್ದರೂ ಹೊರಗಡೆಯಿಂದ ಯಾವ ತೊಂದರೆಯೂ ಬರದಿರುವಂತೆ ಮಾಡಲು ರಕ್ಷಣೆ ಬೇಕೇ ಹೊರತು ನಮ್ಮ ದೇಶದ ಒಳರಕ್ಷಣೆಗೆ ನಮ್ಮ ಮಿಲಿಟರಿ ಪೋಲೀಸುಗಳನ್ನು ಬಲಪಡಿಸುವುದು ಸರಿಯಲ್ಲ.

ಹೊರಗಡೆಯಿಂದ ನಮಗೆ ಧಾಳಿ ಬರಬಹುದು, ನಮ್ಮ ಸ್ವಾತಂತ್ರ್ಯಕ್ಕೆ ಅಪೋಹ ಬರಬಹುದು. ಇದನ್ನು ತಡೆಗಟ್ಟುವುದಕ್ಕೆ ಅವಶ್ಯಕವಾದಷ್ಟು ಮಾಡಿಕೊಳ್ಳಬೇಕೇ ಹೊರುತು, ಅದನ್ನು ಬಿಟ್ಟು ಈಗ ಮಾಡಿರುವಂತೆ ಯಾವ ರಾಜಕೀಯ ಸಂಸ್ಥೆಯನ್ನೂ ಬಂಧನದಲ್ಲಿಡುವ ಪ್ರಯತ್ನ ಮಾಡ ಕೂಡದು. ಇದೇ ವಿಷಯವನ್ನು ತಾವೂ ಕೂಡ ಎಷ್ಟೋ ಸಲ ಟೀಕೆ ಮಾಡಿಲ್ಲವೇ? ಈಗ ತಾವು ಅಧಿಕಾರಕ್ಕೆ ಬಂದಾಗ ಆ ಹಿಂದಿನ ಪದ್ಧತಿಯನ್ನೇ ಅನುಸರಿಸಬಾರದು. ಬೇಕಾದರೆ ತಪ್ಪು ಮಾಡಿದವರಿಗೆ ಶಿಕ್ಷೆ ಮಾಡಿ. ಅವಕ್ಕೆಲ್ಲಾ ಕ್ರಮವಾದ ಕೋರ್ಟುಗಳಿವೆ. ತಪ್ಪು ಸಾಬೀತು ಮಾಡಿ ಶಿಕ್ಷೆ ಮಾಡಲಿ. ಹಾಗೆ ಮಾಡದೆ ತಮ್ಮ ಅಧಿಕಾರವನ್ನು ಉಪಯೋಗಿಸಿಕೊಂಡು ವಿಚಾರವಿಲ್ಲದೆ ತಾವು

ಬಂಧನದಲ್ಲಿಡುವುದಾದರೆ ಹಿಂದಿನ ಸರ್ಕಾರಕ್ಕಿಂತಲೂ ನಿಕೃಷ್ಟವಾಯಿತೇ ಹೊರತು, ಅದಕ್ಕಿಂತ ಉತ್ತಮವೆಂದಾಗಲೀ ಅಥವಾ ಪ್ರಜಾ ಸರ್ಕಾರವೆಂದಾಗಲೀ ಹೇಳುವುದಕ್ಕೆ ಕಷ್ಟವಾಗುತ್ತದೆ.

ಗ್ರಾಮಾಂತರ ವಿಷಯ. ನಮ್ಮ ದೇಶದಲ್ಲಿ ಸುಮಾರು 20,000 ಗ್ರಾಮಗಳಿವೆ. ಈ ಗ್ರಾಮಗಳ ಅಭಿವೃದ್ಧಿ ಯಾವ ರೀತಿಯಾಗುತ್ತಿದೆಂದು ಹೇಳುವುದಾದರೆ ಅವುಗಳು ನಿಜವಾಗಿಯೂ ಬಹಳ ಹೀನಸ್ಥಿತಿಯಲ್ಲಿವೆಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಏನಿದ್ದರೂ ತಾವು ಗ್ರಾಮಾಭಿವೃದ್ಧಿ ಮಾಡತಕ್ಕ ವಿಷಯ ಬರೀ ಪ್ರಚಾರದಲ್ಲಿ ಮಾತ್ರ ಪರಿಣಮಿಸುತ್ತದೆಯೇ ಹೊರತು, ನಿಜವಾಗಿಯೂ ಕಾರ್ಯತಃ ಎಲ್ಲಿಯೂ ಅಭಿವೃದ್ಧಿಗೆ ಬಂದಿದೆಯೆಂದು ಖಂಡಿತವಾಗಿ ಹೇಳುವ ಹಾಗಿಲ್ಲ. ಏಕೆಂದರೆ ಗ್ರಾಮಗಳು ಮುಂದಕ್ಕೆ ಬಂದಿರುವುದಕ್ಕೆ ಗ್ರಾಮಗಳು, ಉಚ್ಛ್ರಾಯ ಸ್ಥಿತಿಯಲ್ಲಿರುವುದಕ್ಕೆ ಒಂದು ಗುರುತು. ಏನೆಂದರೆ, ಗ್ರಾಮದಲ್ಲಿರತಕ್ಕ ಎಲ್ಲಾ ಜನರಿಗೂ ಸಾಕಾದಷ್ಟು ಅನ್ನ ಬಟ್ಟೆ ಇರುವಂತಾಗಬೇಕು. ಅಲ್ಲಿರತಕ್ಕ ಪ್ರತಿಯೊಬ್ಬ ವಯಸ್ಸಿಗೆ ಬಂದ ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಿಗೂ ಪಾಠಶಾಲೆಗೆ ಹೋಗತಕ್ಕ ಅವಕಾಶವಿರಬೇಕು. ಎಲ್ಲಾ ಜನರಿಗೂ ವೈದ್ಯಸಹಾಯವಿರಬೇಕು. ವಾಸ ಮಾಡಲು ಪ್ರತಿಯೊಬ್ಬರಿಗೂ ಮನೆ ಒದಗಿಸಬೇಕು. ಸಂಚಾರ ಸೌಲಭ್ಯಗಳಿರಬೇಕು. ಇಷ್ಟೊಂದು ಅನುಕೂಲಗಳಿದ್ದರೆ ಆ ಗ್ರಾಮಗಳು ನಿಜವಾಗಿಯೂ ಅಭಿವೃದ್ಧಿ ಸ್ಥಿತಿಯಲ್ಲಿವೆಯೆಂದು ಹೇಳಬಹುದು. ಆ ಒರೆ ಗಲ್ಲಿನ ಮೇಲೆ ತಾವು ಒರೆ ಹಚ್ಚುವುದಾದರೆ, ಈಗ ನಮ್ಮ ದೇಶದಲ್ಲಿ ಎಷ್ಟು ಗ್ರಾಮಗಳು ಸಿಕ್ಕುತ್ತವೆಂದು ನೋಡಿದರೆ, ಅರ್ಧಕ್ಕರ್ಧವೂ ಕೂಡ ಸಿಕ್ಕುವುದಿಲ್ಲವೆಂದು ನಾನು ಹೇಳುತ್ತೇನೆ. ಈ ವಿಷಯದಲ್ಲಿ ಕೂಡ ತಾವು ಬಡ್ಜೆಟ್ಟಿನಲ್ಲಿ ಏನೂ ಅವಕಾಶ ಮಾಡಿರುವಂತೆ ಕಾಣಬರುವುದಿಲ್ಲ. ಈ ಶೋಚನೀಯಾವಸ್ಥೆಯನ್ನು ತಾವು ಹೋಗಲಾಡಿಸಬೇಕು.

ಇನ್ನೊಂದು ಬಹಳ ಮುಖ್ಯವಾದ ವಿಷಯ. ಇದಕ್ಕಾಗಿ ತಾವು ಸರಿಯಾದ ಕಾರ್ಯಕ್ರಮ ಹಾಕಿಕೊಳ್ಳಬೇಕೆಂದು ಹೇಳುತ್ತೇನೆ. ಸುಮ್ಮನೆ 5–10 ಲಕ್ಷರೂಪಾಯಿಗಳನ್ನು ಒದಗಿಸಿಬೇಕಾದ ವ್ಯವಸ್ಥೆ ಮಾಡಿಸಿದ್ದೇವೆಂದು ಹೇಳಿದ ಮಾತ್ರಕ್ಕೇ ಗ್ರಾಮಾಭಿವೃದ್ಧಿ ಯಾಗುವುದಿಲ್ಲ. ಇದಕ್ಕಾಗಿ ಒಂದು ಶಿಸ್ತಿನ ಕಾರ್ಯಕ್ರಮವನ್ನು ಹಾಕಿಕೊಳ್ಳಿ. ಯಾವ ಸರ್ಕಾರ ಬರಲಿ, ಯಾವ ರೀತಿಯಲ್ಲೇ ಸರ್ಕಾರ ಬದಲಾವಣೆಯಾಗಲಿ, ಆ ಕಾರ್ಯಕ್ರಮ ಅವಿಚ್ಛಿನ್ನವಾಗಿ ನಡೆದುಕೊಂಡು ಹೋಗುವ ಹಾಗೆ ಯೋಜನೆಯನ್ನು ತಯಾರುಮಾಡಿ. ಅದರಂತೆ ಮಾಡಿದರೆ ನಾವು ಮುಂದುವರಿಯುವುದಕ್ಕೆ ಸಾಧ್ಯವೇ ಹೊರತು ಹಾಗಿಲ್ಲದೆ ಒಬ್ಬೊಬ್ಬರೂ ಒಂದೊಂದು ಕಾರ್ಯಕ್ರಮ ಹಾಕಿ ಅವರು ಹೋದಹಾಗೆ ಅವರ ಹಿಂದೆಯೇ ಅವರ ಯೋಜನೆಗಳೂ ಹೋದರೆ ಹಳ್ಳಿಗಳು ಎಂದಿನಂತೆಯೇ ಉಳಿದಿರುವುದು ಖಂಡಿತ. ಈಗಿನ ಸರ್ಕಾರದ ಮೇಲೆ ಆರೋಪಣೆ ಮಾಡಬೇಕೆಂದು ನಾನು ಈ ರೀತಿ ಹೇಳುತ್ತಿಲ್ಲ.

ಇನ್ನು ಮೇಲೆ ಜನರ ವಿಷಯದಲ್ಲಿ ತಮ್ಮ ಜವಾಬ್ದಾರಿ ಹೆಚ್ಚಿದೆ. ಇದರಿಂದ ತಾವು ಮುಕ್ಕಾಲು ಭಾಗ ತಮ್ಮ ಗಮನವನ್ನು ಹಳ್ಳಿಗಳ ಕಡೆಗೆ ತಿರುಗಿಸಬೇಕು.

ಅಧ್ಯಕ್ಷರೇ, ಕೊನೆಯದಾಗಿ ಒಂದು ಮಾತು, ನಾವು ಮೊದಲು ನೋಡಿದ ಹಾಗೆ 5 ಜನ ಮಂತ್ರಿಗಳಿದ್ದರು. ಈಗ ದಿವಾನರೂ ಸೇರಿ 10 ಜನರಿದ್ದಾರೆ. ಆದರೂ ಕೂಡ ಕಾರ್ಯಕಲಾಪಗಳು ನಡೆಯುವುದು ಮಾತ್ರ ಮೊದಲು 5 ಜನರಿದ್ದಾಗ ಎಷ್ಟು ನಡೆಯುತ್ತಿತ್ತೋ ಇನ್ನೂ ಕಡಿಮೆಯಾಗಿಯೇ ನಡೆಯುತ್ತಿದೆ. ನ್ಯಾಯವಾಗಿ ಮೊದಲಿಗಿಂತಲೂ ಎರಡರಷ್ಟು ಕಾರ್ಯನಡೆಯಬೇಕಾಗಿದ್ದರೂ ಆದೇಕೆ ನಡೆಯುತ್ತಿಲ್ಲವೋ ಗೊತ್ತಿಲ್ಲ. ಮದ್ದೂರಿನ ಒಂದು ಹೈಸ್ಕೂಲಿಗೆಂದು ಗ್ರಾಮಸ್ಥರೆಲ್ಲರೂ ಹಣ ಸೇರಿಸಿ 40,000 ರೂಪಾಯಿಗಳನ್ನು ಇಟ್ಟುಕ್ಕೊಂಡು ಸರ್ಕಾರದವರಿಗೆ ಒಂದು ಸ್ಕೂಲು ಕಟ್ಟಿಸಿಕೊಡಿ ಎಂದು ಹೇಳಿ ಒಂದು ವರ್ಷವಾದರೂ ಕೂಡ, ಒಂದು ಅಂದಾಜು ಮಂಜೂರಾಗಿ ಕೆಲಸ ನಡೆಯದೆ ಹೋದರೆ, ಸರ್ಕಾರದ ಕೆಲಸಗಳು ಎಷ್ಟು ಚುರುಕಾಗಿ ನಡೆಯುತ್ತಿವೆಯೆಂಬುದನ್ನು ತಾವೇ ಊಹಿಸಿಕೊಳ್ಳಬೇಕು. ನೀವು ದೂರು ಕೊಡಬೇಕಾದರೇನೋ ಕಷ್ಟವಾಗಿರಬಹುದು. ನಾವೇ ದುಡ್ಡು ಕೊಟ್ಟು ಸಹ, ನೀವು ಮಾಡತಕ್ಕ ಕಾರ್ಯಕ್ರಮ ತೆಗೆದುಕೊಳ್ಳುವುದಕ್ಕೆ ಒಂದು ವರ್ಷವಾದರೆ ಹೇಗೆ? ಇನ್ನಾದರೂ ಕೆಲಸ ಕಾರ್ಯಗಳು ಜಾಗ್ರತೆಯಾಗಿ ನಡೆಯುವಂತೆ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

**ಶ್ರೀ ಡಿ. ವೆಂಕಟಾಚಲಪತಿಶೆಟ್ಟರು** (ಕಾನಕಾನಹಳ್ಳಿ ಮುನಿಸಿಪಾಲಿಟಿ) – ಸ್ವಾಮಿ, ಈಗ ನಮ್ಮ ಮುಂದೆ ಮಂಡಿಸಿರತಕ್ಕ 1948–49ನೆಯ ಸಾಲಿನ ಬಡ್ಜೆಟ್ ಹಿಂದಿನ ವರ್ಷಗಳ ಬಡ್ಜೆಟ್ಟಿಗಿಂತಲೂ ಆಶಾದಾಯಕವಾಗಿಲ್ಲ. ಪ್ರಜಾನುರಾಗಿಗಳಾದ ಮಂತ್ರಿಗಳು ಮಾಡುವ ಬಡ್ಜೆಟ್ ಅಲ್ಲ ಎಂಬುದಾಗಿ ನಮ್ಮ ಹಿರಿಯ ಸಹೋದರರಾದ ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು ಈಗತಾನೆ ಹೇಳಿದ್ದಾರೆ. ಹಿಂದಿನ 27 ವರ್ಷಗಳ ಬಡ್ಜೆಟ್ಟನ್ನು ನೋಡಿರತಕ್ಕ ಮಾನ್ಯ ಸದಸ್ಯರು ಈ ರೀತಿ ಟೀಕೆಮಾಡುತ್ತಾರೆಂದು ಕನಸಿನಲ್ಲಿಯೂ ನಾನು ನಂಬಿರಲಿಲ್ಲ. ಬಹು ದಿನಗಳಿಂದಲೂ ಅವರು ಹಿಂದಿನ ಸರ್ಕಾರದ ನೀತಿಯನ್ನನುಸರಿಸಿಕೊಂಡು ಬಂದು ಆಗ ತಯಾರುಮಾಡುತ್ತಿದ್ದ ಬಡ್ಜೆಟ್ಟನ್ನು ಶ್ಲಾಘನೆಮಾಡುತ್ತಿದ್ದವರು. ಈಗ ಹೊಸ ನೀತಿಯನ್ನನುಸರಿಸಿ ತಯಾರುಮಾಡಿರತಕ್ಕ ಈ ಬಡ್ಜೆಟ್ಟು ಎಲ್ಲರಿಗೂ ಒಂದು ಹೊಸ ಹುರುಪನ್ನು ಕೊಡತಕ್ಕದ್ದಾಗಿದೆ.



# ವರಮಾನ ಕೋಟ್ಯಾಂತರ : ಜನಾರೋಗ್ಯಕ್ಕೆ ಅನಾನುಕೂಲ

## ಬಡ್ಜೆಟ್‌ಮೇಲಿನ ಸಾಮಾನ್ಯ ಚರ್ಚೆ

## 07.06.1945

ಈಗ ನಮ್ಮ ಮುಂದಿರತಕ್ಕಂಥ ಈ ಆಯವ್ಯಯ ಪಟ್ಟಿಯನ್ನು ನೋಡುವುದಾದರೆ 9 ಕೋಟಿ ಮೇಲೆ ನಮಗೆ ಉತ್ಪತ್ತಿ ಬಂದಿದೆ. ಹಿಂದಿನ ವರ್ಷಗಳಿಗಿಂತ ಹೆಚ್ಚಾಗಿ ನಮಗೆ ಉತ್ಪತ್ತಿ ಬಂದಿರತಕ್ಕದ್ದು ಒಂದು ಸಂತೋಷಕರವಾದ ವಿಷಯವೆಂದು ಹೇಳಬಹುದು. ಇದರ ಬೆಳವಣಿಗೆ ಈ ಆಯವ್ಯಯ ಪಟ್ಟಿಯಲ್ಲಿ ಜನಸಾಮಾನ್ಯಕ್ಕೆ ಅನ್ವಯಿಸತಕ್ಕ ಬಾಬುಗಳಿಗೆ ಎಷ್ಟೆಷ್ಟು ಮೊಬಲಗು ಒದಗಿದೆ ಎಂಬ ವಿಷಯವನ್ನು ಸ್ವಲ್ಪ ಪರಿಶೀಲಿಸಿ ನೋಡುವುದಾದರೆ, ಈ ಆಯವ್ಯಯ ಪಟ್ಟಿಯನ್ನು ತಯಾರಿಸಿರುವ ಫೈನಾನಷಿಯರ್ ಸೆಕ್ರೆಟರಿಯವರಿಗೂ, ಸರ್ಕಾರದವರಿಗೂ ಅಭಿನಂದನೆಯನ್ನು ಕೊಡುವುದಕ್ಕೆ ನಾನು ಹಿಂತೆಗೆಯುತ್ತೇನೆ. ಏಕೆಂದರೆ, ಸರ್ಕಾರದವರು ಈ ಬಡ್ಜೆಟ್ ತಯಾರು ಮಾಡುವಾಗ ತಮ್ಮ ಕರ್ತವ್ಯವನ್ನು ಸರಿಯಾಗಿ ನೆರವೇರಿಸಿಲ್ಲವೆಂದು ಹೇಳಬೇಕಾಗಿದೆ. ನಮಗೆ ಇಷ್ಟು ಬಾರಿ ಉತ್ಪತ್ತಿ ಬಂದಿದ್ದರೂ ಕೂಡ ಮುಖ್ಯವಾಗಿ ನಾನು ವಿದ್ಯಾಭ್ಯಾಸದ ಶಾಖೆಯನ್ನು ತೆಗೆದುಕೊಂಡು ಹೇಳುತ್ತೇನೆ

ಆಮೇಲೆ ಬಡ್ಜೆಟ್ಟಿನಲ್ಲಿ ಇನ್ನೂ ಅನೇಕ ವಿಷಯಗಳಿಗೆ ಸಾಕಾದಷ್ಟು ಹಣವನ್ನು ಒದಗಿಸಿಲ್ಲ. ಅದರಲ್ಲಿ ನಾನು ಮುಖ್ಯವಾಗಿ ಹೇಳುವುದಾದರೆ, ಇರ್ವಿನ್ ನಾಲಾ ಪ್ರದೇಶದಲ್ಲಿ ತಾವು ಸುಮಾರು 5–6 ಲಕ್ಷ ರೂಪಾಯಿಗಳನ್ನು ಖರ್ಚುಮಾಡಿ 3–4 ತಾಲ್ಲೂಕುಗಳಲ್ಲಿ ಜನರ ಆರೋಗ್ಯಕ್ಕೆ ಅನುಕೂಲಗಳನ್ನು ಕಲ್ಪಿಸಿಕೊಟ್ಟಿದ್ದೀರಿ. ಕೋಟ್ಯಾಂತರ ರೂಪಾಯಿಗಳ ವರಮಾನ ಬರುತ್ತಿರುವಾಗ ಜನರ ಆರೋಗ್ಯಕ್ಕೆ ಇನ್ನೂ ಬಹಳ ಮಟ್ಟಿಗೆ ಹೆಚ್ಚಿಗೆ ಹಣವನ್ನು ಕೊಡಬೇಕೆಂದು ಹೇಳುತ್ತೇನೆ. ಸರ್ಕಾರದವರೇನೋ ನಾವು ಕಾರ್ಯಕ್ರಮವನ್ನು ತೆಗೆದುಕೊಳ್ಳುತ್ತಿದ್ದೇವೆಂದು ಹೇಳಬಹುದು. ಆದರೆ ಅಲ್ಲಿನ ಪರಿಸ್ಥಿತಿ ನೋಡಿದರೆ, ಅವರು ಅಷ್ಟೆಲ್ಲಾ ಖರ್ಚುಮಾಡಿದರೂ ಕೂಡ ಹಿಂದೆ ಅಲ್ಲಿನ ಜನರ ಆರೋಗ್ಯವು ಎಷ್ಟು ಮಟ್ಟಿಗಿತ್ತೋ ಈಗಲೂ ಅಷ್ಟೇ ಇದೆ. ಇತ್ತೀಚೆಗೆ ಇರ್ವಿನ್‌ನಾಲಾ ಪ್ರದೇಶದಲ್ಲಿ ಈ ವಿಚಾರವನ್ನು ಪ್ರತ್ಯಕ್ಷವಾಗಿ ನೋಡಬಹುದು. ಹೀಗಿರುವಾಗ ನಮ್ಮ ದೇಶದ ಆರೋಗ್ಯವು ಸಂಪೂರ್ಣವಾಗಿ ಮೊದಲಿದ್ದ ಹಾಗೆ ಮಾಡಬೇಕಾದರೆ ಏನೇನು ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೋ ಅದನ್ನೆಲ್ಲಾ ಆದಷ್ಟು ಬೇಗನೆ ಕೈಗೊಳ್ಳಬೇಕೆಂದು ನನ್ನ ಅರಿಕೆ. ಹಾಗಿಲ್ಲದೆ ಉದಾಸೀನಮಾಡಿ ಇನ್ನೂ ಅನೇಕ ವರ್ಷಗಳು ತಳ್ಳಿ ಗ್ರಾಮಗಳೆಲ್ಲಾ ಬೇಚರಾಕ್ ಆದಮೇಲೆ ತಾವು ಈ ಕಾರ್ಯಕ್ರಮಗಳನ್ನು ತೆಗೆದುಕೊಂಡರೆ ಏನೂ ಪ್ರಯೋಜನವಿಲ್ಲ. ಸರ್ಕಾರದವರು ಈ ವಿಚಾರದಲ್ಲಿ ಹೆಚ್ಚು

ಸಹಾನುಭೂತಿಯನ್ನು ವಹಿಸಿ ಈ ಮಲೇರಿಯಾ ರೋಗದ ಹಾವಳಿಯನ್ನು ತಡೆಗಟ್ಟುವುದಕ್ಕೆ ಜರೂರಾಗಿ ಕೆಲಸ ಕಾರ್ಯಗಳನ್ನು ನಡೆಸುತ್ತಾರೆಂದು ನಾನು ನಂಬಿದ್ದೇನೆ.

ಆಮೇಲೆ ಮಾಧ್ಯಮಿಕ ಶಾಲೆಗಳ ವಿಷಯದಲ್ಲಿ ಒಂದು ವಿಚಾರ. ಈ ಮಾಧ್ಯಮಿಕ ಶಾಲೆಗಳಲ್ಲಿ ಓದುತ್ತಿರುವ ಚಿಕ್ಕ ಮಕ್ಕಳಿಗೆ ಮಧ್ಯಾಹ್ನದ ಉಪಾಹಾರಕ್ಕಾಗಿ ಹೋದ ವರ್ಷದ ಬಡ್ಜೆಟ್ಟಿನಲ್ಲಿ ಒಂದು ಸಾವಿರ ರೂಪಾಯಿಗಳನ್ನು ಒದಗಿಸಿದ್ದರು. ಈ ವರ್ಷದ ಬಡ್ಜೆಟ್ಟಿನಲ್ಲಿ 6,000 ರೂಪಾಯಿಗಳನ್ನು ಒದಗಿಸಿದ್ದೀರಿ. ನಿಜವಾಗಿಯೂ ಇದು ಸಾಕಾಗುವುದಿಲ್ಲ. ಈ ಏರ್ಪಾಡಿನಿಂದ ಆಗತಕ್ಕ ಪ್ರಯೋಜನ ಬಹಳ ಅಮೂಲ್ಯವಾದದ್ದು. ಈ ವಿಚಾರದಲ್ಲಿ ಇನ್ನೂ ಹೆಚ್ಚಿನ ಹಣ ಒದಗಿಸಿಬೇಕಾದ್ದು ಅವಶ್ಯಕ. ಅದರಲ್ಲೂ ಗ್ರಾಮಾಂತರಗಳಲ್ಲಿ ಮಾಧ್ಯಮಿಕ ಶಾಲೆಗಳಿರುವ ಕಡೆ ಇದರ ಅವಶ್ಯಕತೆ ಇನ್ನೂ ಹೆಚ್ಚಾಗಿದೆಯೆಂದು ನಾನು ಒತ್ತಿ ಹೇಳಬೇಕಾಗಿದೆ.

ಸರ್ಕಾರಿ ನೌಕರಿಗಳ ಹಂಚಿಕೆ ವಿಷಯ ಸಾಮಾನ್ಯವಾಗಿ ಸರ್ಕಾರಿ ಅಧಿಕಾರಕ್ಕೆ ಜನಗಳನ್ನು ನೇಮಿಸಿಕೊಳ್ಳತಕ್ಕದ್ದು ಒಂದು ಬಹಳ ತೊಡಕಿನ ಸಮಸ್ಯೆ ಆಗಿದೆಯೆಂದು ಹೇಳಿದರೆ ತಪ್ಪಾಗಲಾರದು. ಈ ವಿಚಾರದಲ್ಲಿ ಸರ್ಕಾರದವರು ಕೂಡಲೇ ಸೂಕ್ತವಾದ ಕಾರ್ಯಕ್ರಮವನ್ನು ತೆಗೆದುಕೊಳ್ಳಬೇಕು. ಸರ್ಕಾರದವರು ನೌಕರಿಯನ್ನು ಹಂಚತಕ್ಕ ವಿಚಾರದಲ್ಲಿ ಒಂದು ನಿರ್ದಿಷ್ಟವಾದ ನೀತಿಯನ್ನು ಅನುಸರಿಸಬೇಕು. ಹಾಗೆ ಮಾಡುವುದರಲ್ಲಿ ಹಿಂಜರಿಯವುದು ಸರ್ಕಾರದವರಿಗೂ ಒಳ್ಳೆಯದಲ್ಲ. ಪ್ರಜೆಗಳಿಗೂ ಕ್ಷೇಮವಲ್ಲ. ಇದುವರೆಗೂ ಆದದ್ದು ಆಯಿತು. ಇನ್ನು ಮುಂದೆಯಾದರೂ ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ಸರ್ಕಾರದವರು ಕೈಗೊಳ್ಳಬೇಕೆಂದೂ, ಅದನ್ನು ಸರ್ವರಿಗೂ ತೃಪ್ತಿಕರವಾದ ರೀತಿಯಲ್ಲಿ ಏರ್ಪಾಡುಮಾಡಬೇಕೆಂದೂ ತಮ್ಮನ್ನು ನಾನು ಕೇಳಿಕೊಳ್ಳುತ್ತೇನೆ.

ಕಡೆಯದಾಗಿ ಇನ್ನೊಂದು ವಿಷಯ ಮಾತ್ರ ಹೇಳಿ ಮುಗಿಸುತ್ತೇನೆ. ಈ ಸಾರಿಯ ಬಡ್ಜೆಟ್ಟಿನಲ್ಲಿ ನಾನು ಒಂದು ಅಂಶವನ್ನು ಬಹಳ ಕಾತುರದಿಂದ ನೋಡಿದೆ. ನಮ್ಮ ದೇಶದಲ್ಲಿ ಬರುವ ವರ್ಷದಲ್ಲಿ ಖಾಸಗಿ ಮಂತ್ರಿಗಳನ್ನು ನೇಮಿಸುವ ವಿಷಯದಲ್ಲಿ ಇನ್ನೂ ಹೆಚ್ಚಿಗೆ ಅವಕಾಶವನ್ನೇನಾದರೂ ಮಾಡಿದೆಯೇ ಎಂಬುದನ್ನು ನೋಡಿದರೆ ತಾವು ಏನನ್ನೂ ಮಾಡಿಕೊಂಡಿರುವಹಾಗೆ ಕಾಣುವುದಿಲ್ಲ. ಈಗಿರುವ ಖಾಸಗಿ ಮಂತ್ರಿಗಳ ದೇಶ ಪ್ರೇಮ, ಕಾರ್ಯ ತತ್ಪರತೆ, ನಿಸ್ವಾರ್ಥಕ ಕಾರ್ಯಗಳು ಎಲ್ಲರ ಮೆಚ್ಚಿಗೆಗೂ ಪಾತ್ರವಾಗಿವೆ ಎಂದು ಹೇಳಿ ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ.



## ಬಜೆಟ್ ಮೇಲಿನ ಸುದೀರ್ಘ ಚರ್ಚೆಗಳು

## 25.06.1936

Sub-Division officers visit hobli head-quarters once a year and Deputy Commissioners once in five years. This is not sufficient and will not help to improve the villages. Officers must chalk out a programme in such a way that they halt for a day or two at each hobli headquarter every month. Unless this is done, villages will not improve.

There seems to be an impression on the part of Government that village panchayats have enough money at their credit which they can spend for their own improvement and as such do not require any special help. That is an erroneous impression, and I shall refer to it in greater detail in connection with one of the cut motions. A few panchayets, no doubts, have some accumulated funds, but they are not free to spend them as they think best. And there are many reasons for it. Mr. Subbrama Chetty remarked that even Rs. 75,000 granted to Bangalore City was not adequate. If that is so, would Rs. 30,000 or Rs. 40,000 be adequate for all the 17,000 villages in the State? As a justification for enhanced grant for Bangalore City, Mr. Subbarama Chetty said that the citizens of the City were contributing a large revenue to the State by way of excise, income-tax, etc. Similarly, the bulk of the land revenue is being paid by the people in the rural parts and so it is only right that Government shold pay sufficient attention to improve the villages also. Let us now see how much is spent for the benefit of the raiyat. A lot of money is spent on Education. How much of it is spent for the benefit of the children of the raiyats in the rural parts? Government are levying education cess from them. This is intended for giving more schools in the rural parts. Have more schools been opened there? No. Even in places where the people are prepared to provide buildings, Government plead their inabilitiy to sanction the opening of schools there on the ground of financial stringency. Is this justified? Does this show that the Government are impartial and are acting in the best interests of the rural population? So far as the cities and towns are concerned, educational facilities are available to every boy and girl. Should not at least one in ten have similar facilities in the villages? The Government must seriously consider

the question and make up their mind to help the villages. This question has been pressed on the attention of the Government many a time in the past, but so far, no tangible benefit has been derived by the people, and they are getting disgusted and disappointed.

Our state depends for its progress on the proper upkeep of our tanks, but most of them are in a state of utter disrepair. Government must provide funds for repairing and restoring these tanks. Otherwise, the country will suffer and Government will lose. At present, year after year, the number of tanks in disrepair is increasing. Government should take up at least a certain number of tanks for restoration and repair every year.

Some members here feel that the Irwin Canal on which lakhs of rupees have been spent has been a great boon to the people of Mandya and other taluks. But I appeal to those members to visit the area in person and find out the extent to which the people there are suffering. Diseases are on the increase; and people are dying like files. For want of roads and culverts on the channels which are newly constructed, the people have to cover very much longer distances than they were covering before the construction of these channels. But that is not their main grievance. As a result of stagnation of water around the villages, malaria is rampant. I appeal to the Government to pay greater attention to medical relief, sanitation and roads in the tract. After the construction of the Irwin Canal, diseases have increased, but correspondingly medical relief has not. For instance, in Besagahalli village, the number of malaria patients before the Irwin Canal was constructed, was 1,200. Now it is 6,800. This is the number of only 'those patients who come to the dispensary for medical aid. There may be hundreds more who did not go to the hospital. In some places no medical aid whatever is available. For example, in Arasanakere, a village with a population of 3,000 (including the hamlets attached to the village) there is no dispensary at all. This village, is 7 miles from Maddur. People in the locality feel that the Irwin Canal is more a curse to them than a boon. If timely help is not given to the people in the locality-medical aid, roads and culverts, etc., the tract will get depopulated and the income from land revenue and otherwise will be lost for ever to the Government. I therefore appeal

to the Government to pay special attention to that area as in the case of Kolar Gold Field area.

As regards the Sugar Factory, Government have reserved for themselves 60 per cent of the shares. The factory can run successfully only if the raiyats grow and supply cane steadily. Those who supply cane must be given a share of the ownership. In other words, you must release some of the shares now held by Government for being taken over by cane-growers. Now that the raiyats are eager to own shares, Government must comply with their request.

I have got to say one word in connection with the Railway Department. There are a number of gangmen and maistries working in the department. They are poor people getting small pay. They serve in the department for 30 years and at the end of their service, they are given some nominal grant and sent away. That policy might have been all right if the lines were worked by a foreign company. Now that the lines are worked by the State itself, these people must be given regular pensions just as other menials in the several other departments of Government and there should be no invidious distinctions made.



# General Discussion on the Budget

## 15.06.1937

In congratulating the Government on being able to present a surplus on budget, Mr. S.C. Mallaiah brought to notice certain difficulties experienced by the raiyats in connection with the collection of land revenue during the year. In the Irwin Canal area, the authorities were withholding moneys payable to the raiyats on account of sugar-cane supplied to the Sugar Factory and adjusting the same towards land revenue due this arrangement was causing great inconveince to the people especially when the amounts due to them were not more than the assessment which they had to pay, and should be discouraged. He would however not object to the practice continuing in case the raiyats themselves agreed to such adjustment being effected.

The member expressed his greateful thanks to the Government for establishing more and more of model villages. He wished that a more intensive programme of establishing model villages be undertaken every year and requested that provision on an adequate scale be made for the purpose.

As regards the Bhadravati Iron Works, he was reminded of the assurance which Government had given to the House during the previous year that as a result of the manufacture of steel, larger profits could be expected in the following years, and expressed dissatisfaction that a working profit of only Rs. $1^1/_2$ lakhs had been anticipated for the next year, and that even this had been proposed to be charged off to the dedciation account or otherwise used up. The general revenues would in no way be benefited thereby and this had caused considerable anxiety in the minds of the public. He hoped that at least in future years the Works would show substantial profits after making sufficient provision for depreciation.

The need for veterinary dispensaries and breeding bulls was being felt in several villages. The member expressed the grateful thanks of the raiyat population for the steady progress which the Government were securing in these directions. But if the demands from all the rural

areas had to be adequately met, much more liberal grants to the Veterinary Department were very necessary.

Malaria was spreading fast in the Irwin Canal area in spite of the attempts made by the Public Health Department to combat it. This was partly due to the fact that the measures of relief afforded by the department were not reaching the affected people in all cases, because the villagers were unable to walk all the way to the dispensaries for securing quinine. The member therefore suggested that arrangements should be made for the free distribution of quinine in all the infected villages.

In conclusion, the member endorsed the hope expressed by one of the previous speakers that during the term of office of the new registrar, the co-operative movement in the State would receive added fillip.



# Budget Discussion

## 11.6.1940

**Mr. S.C. Malliah** congratulated the Government on their presenting a budget which was an improvement on the previous year's budget to the extent of Rs. 25 lakhs. At a time like this, one would naturally like to examine to what extent the nation-building departments had benefited and such an examination had revealed that the said departments had not received their share of the increased revenue. The grants for irrigation, primary education, rural reconstruction and inter-village communications should have been much more than those provided in the budget. Though Rs. 13.81 lakhs had been provided for Public Improvements, the cities of Bangalore and Mysore alone took away a big slice of Rs. 3.45 lakhs and Rs. 1.50 lakhs, respectively. The sum of Rs. 3 lakhs provided for drinking water wells in villages was too scanty, taking into consideration that there were 16,000 villages in the State. Though the accumulated village panchayet fund amounted to a large sum in the aggregate, in the vast majority of cases the balance at the credit of each panchayet was very small and no big project could be undertaken out to it and hence it was no use expecting any panchayet to take up development schemes. Unless the panchayets got a definite grant from Government every year according to a plan, no progress could be achieved in rural areas. The people could not be expected to rest content with a few model villages that had been brought into existence by Government. At the rate at which this activity was proceeding. it would take several years before all the villages could be improved. For purposes of village improvement, the most vital need was inter-village communications. The First Member was pleased to say that a separate provision had been made in the budget for this purpose. In these days of quick transport, it would be unfair on the part of the Government to expect the people in the villages to rest content with the existing position. If sustained progress should be made in this direction, it was necessary and desirable to constitute a special fund on the lines of the Road Fund for this purpose to which not only the Government but also village panchayets and district boards must contribute their quota every year.

Referring to the grant for the Agricultural Department he regetted that it had been reduced by Rs. 56,000 because the economic progress

of rural population depended upon the progress of agriculture. In this connection, he pleaded for a re-orientation of the educational system in the State by giving an agricultural bias to it. He was of opinion that the existing system of purely literary education had not enabled the youths of the country to eke out their livelihood and this had led the younger generation to participate in subversive activities. The new type of education to be evolved should be such as to enable the youth to earn a living without difficulty. To achieve this object he suggested that in places where irrigation facilities existed, agricultural schools might be established. The present experiment of providing a few periods in a week in the middle schools for agricultural training was of no use whatever to the students. What was happening at present was that one batch of students sowed the seed and the next batch cut the crop as the former would have gone out of the school by the time the crop was ready for reaping. He was of opinion that proper training which would enable them to earn a living could be imparted only when separate schools were opened for agricultrual training for a period of at least two to three years at a stretch. In this connection the member referred to the Somanahalli Agricultrual School where provision for scholarship had been made only for one year and requested that the provision should be enhanced adequately to cover the entire academic year. Out of 45 S.S.L.C. students who sought admission into the school. Only 25 could be admitted for lack of accommodation. The fact that students from distant places like Tumkur, Chitradurg and other districts had applied for seats showed how much the people appreciated the value of agricultural training. He therefore pleaded for enlarging the school so as to take in more students.

The member then referred to the scheme of agricultral colony in the Irwin Canal area recently sanctioned by the Government and hoped that this would prove to be a better success than the Bhadra Agricultrual Colony and help the candidates selected for colonisation to make a better living there.

Dealing next with the grant under Education, Mr. S.C. Malliah ponited out that the University had secured a lakh of rupees more than pointed was allotted to it in the current year's budget. He recalled to

mind that he had been repeatedly urging on the attention of the Government that their policy should be to satisfy the requirements of primary education first and think of University education only when there was surplus money. Even thought the University was maintained entirely with the tax-payer's money pupils from rural areas could not secure admission into the various colleges. It had come to his knowledge that during the current year, out of 3 Vokkaliga students who had applied for seats in the Engineering College, only one had been admitted. This had caused not a little disappointment to the community which had been contribution the largest share to the general revenues of the State. He urgent that this state of affairs should be improved so that no student seeking admission into the professional colleges would be denied a seat.

As regards the provision for drinking water wells, only Rs. 3 lakhs had been allotted as against Rs. 3.25 lakhs in the previous year. Since Government had committed themselves to provide such wells in all the villages within a period of five years, he emphasised that the work once taken up should be got completed at all costs and that no part of the grant allotted for any year should be allowed to lapse.

He then referred to the activities of the Public Health Department and brought to notice that malaria was rampant in the entire Irwin Canal area. No doubt, the department was doing their best to stamp out this epidemic. But at present, only a few villages had been taken up for anit-malarial campaign. He said that this campaign should be enlarged to cover all the villages in the area and that the department should do everything humanly possible to stamp out the disease.

As regards the construction of roads in the area, he said that it had come to his notice that only roads to villages from which the Sugar Company was getting supplies of sugar-cane were being constructed and he could not understand why it should be so.

**The President** explained that it was because the Company was meeting the cost of such roads.

**Mr. S.C. Malliah** urged that as far as possible similar facilities should be provided to other villages also by the Government.

Lastly, he referred to the provision for Backward Class Scholarships for middle and high scholls and said that the extra grant of Rs. 4.000 allotted in the budget should be substantially increased, as without it the progress of backward communities would be retarded. He added that when the scheme of expansion of primary education was put into force, there would be need for a larger number of teachers, and steps should be taken from now to provide for that contingency by creating facilities for their training. He also suggested that the value of individual scholarships in each grade might be reduced byhalf so that double the existing number of students might share the benefit of the scholarship scheme.



# General Discussion on the Budget

## 08.06.1942

**Mr. S.C. Malliah** said that although a revenue of more than Rs.5 crores. was expected, and a surplus of one lakh odd had been estimated in the budget under discussion and it would have to be looked at from the stand-point whether adequate funds had been provided for the primary needs of the people. Viewing it that way, he was obliged to remark that the provision under Education, Village Improvements, etc., was not *pari passu* with the improvement in the revenues. But that apart, Government deserved to be congruatulated in one important respect. There had been so far no definite programme in regard to the improvement of villages and so it was gratifying to hear that a definite plan had been formulated to improve all the villages within a period of five years. But at the same time, he felt that the more laying down of a programme would not suffice. It must be acted upon and for the scheme to be successful, adequate funds should be provided.

As regards the need for self-sufficiency during the war conditions, he said that the food-production drive which the Government had undertaken had not come a day too soon. Action should have been taken long ago. Much of valuable time had been lost already. Nevertheless, it was better late than never. But in order that production might reach the maximum limit, it was necessary that implements of husbandry, seeds and manure should be supplied to the poor agriculturists on a very liberal scale and they should also be given takavi loans. By merely granting lands to them for cultivation, the desired object could not be achieved. In this connection he pointed out that the prices of agricultural implements had already gone up considerably and within a few months it was quite possible that they would not be available at all. It was therefore essential that they should be prepared locally, at the Bhadravati Iron and Steel Works, for instance, and supplied to the agriculturists, necessary action in that regard being commenced immediately.

Continuing, the speaker said that so far as the cotton crop under the Irwin Canal area was concerned the yield last year was not more than 5 to 10 maunds per acre. The low yield was due to belated sowing

in May and June under the advice of the Agricultural Department. Many raiyats had suffered considerable losses, and he requested that some concession might be shown to them in the matter of kandayam and contribution. In this connection, he remaked that the department should not have conducted experiments on the raiyats' lands and at the latter's cost. They should, in the first instance, have carried out the experiments in their own farms and then, with the experience gained, should have given advice to the raiyats. If similar things occured in the future, he was afraid that the raiyat would lose confidence in the department and that would not be conducive to the agricultural progress of the State.

As regards Railways, he reminded the Government of their promise sometime ago in the matter of providing electric fans in third class bogies and requested the Government to provide the necessary amenities at least in the budget year, especially when they expected expected increased receipts under Railways.

**The President** pointed out that for the present the required materials could not be got owing to war conditions.

**Mr. S.C. Malliah** referred to the indebtedness of the raiyats. He appreciated the several measures adopted by the Government to relieve the agriculturists of this burden of indebtedness, such as by the establishment of land mortgage banks and co-operative societies, the enactment of the Agriculturists Relief Act, the Usurious Loans Act, etc. But in spite of all these measures, the debt burden had not been lessened to any appreciable extent. It was necessary that Government should adopt a more effective and bold measure to relieve them of their indebtedness.

He next referred to the need for allottmenting more time for non-official business in the Representative Assembly and reminded the Government of the recommendation of the Constitutional Reform Committee in the matter. He pointed out that the time allotted for the transaction of non-official business being short, much of the business was lapsing. For instance, out of nearly 218 representations tabled for the present session, only 5 or 6 had been discussed so far and the others would lapse for want of time.

**The President** replied that this point might be considered on the last day when the question of having a third session for the Representative Assembly would be taken up for discussion.

**Mr. Malliah** next referred to the observation made by Mr. Chengalarya Reddy about the desirability of having a non-official President for the Representative Assembly. While he agreed with him in that respect, he wished to point out that in the Reform Committee also the matter came up for discussion and the committee were of the opinion that there was some advantage in the Dawan being the President of the Assembly, since they felt that thus alone the representatives of the people could directly ventilate their grievances before him and get them remedied, and the members of the House would not have such an opportunity if there was a non-official President having no connection with the administration. And so far as the conduct of the deliberations in the Assembly was concerned, the speaker emphasized that although the Dewan was the President, he carried out his duties impartially without bringing to bear official bias in conducting the deliberations of the House.

**Mr. K. Chengalaraya Reddy**, by way of offering a word of personal explanation, said that he had not cast any reflection on the way in which the Dewan conducted the deliberations in the House.

Proceeding, **Mr. Malliah** referred to the remarks made by Mr. Chengalaraya Reddy in regard to non-acceptance by Government of Mr. Chikkalingiah's resignation of the President-ship of the Mandya District Board and the retention of Mr. Dharmappa as President of the Hassan District Board. It was a well recognised principle that the person, whatever political party he belonged to, should take up a non-party attitude as soon as he was elevated to the *gadi* of the President of a constitutional body, (Mr. Chengalaraya Reddy : 'Question'.) The present Local Self-Government Minister was a member of the Rashtriya Sabha before he was a member of the Rashtriya Sabha before he was appointed as Minister. But, as soon as he became a Minister, he ceased to be a member of that party following the established convention, because he was expected to gurard the interests of every party. (Mr. S.N.M. Razvi: 'I entirely agree with the member.') In the same way, Mr. Chikkalingiah, though elected to the District Board on the Congress ticket, should case to have a party outlook in the discharge of his duties as President. If he

ಇಬ್ಬರೂ ಸೈಕಲ್ ಮೇಲೆ ಮನೆ ಮನೆಗೆ ಹೋಗಿ ಕ್ಯಾನ್ವಾಸ್ ಮಾಡೋರು. ಆಗೆಲ್ಲ ಈಗಿನ ಥರ ಪೋಸ್ಟರ್ರೂ, ಬ್ಯಾನರ್ರೂ, ಮೈಕು ಎಲ್ಲ ಇರ್ತಾ ಇರ್ಲಿಲ್ಲ.

ಪಬ್ಲಿಕ್ ಜೀವನದಲ್ಲಿ ನಮ್ಮ ತಂದೆಯವರಿಗೆ ಒಳ್ಳೆ ಹೆಸರಿತ್ತು, ಹೆಚ್.ಸಿ. ದಾಸಪ್ಪ ಸಾಹುಕಾರ್ ಚೆನ್ನಯ್ಯ, ರೆಡ್ಡಿಯವರು ಎಲ್ಲ ಮನೆಗೆ ಬರೋರು. ಊಟ ಮಾಡಿಕೊಂಡು ಹೋಗೋರು. ಸರ್ ಮಿರ್ಜಾಇಸ್ಮಾಯಿಲ್ ಅವರಂತೂ ತಂದೆಯವರಿಗೆ ತುಂಬಾ ಹತ್ತಿರ. ಅವರನ್ನ ಕಂಡ್ರೆ ನಮ್ಮ ತಂದೆಯವರಿಗೆ ತುಂಬಾ ಗೌರವ. ಮರ್ಯಾದೆ. ಆದರೆ ಅವರ ಸ್ನೇಹಾನ ನಮ್ಮ ತಂದೆ ಯಾವತ್ತೂ ತಮಗಾಗಿ, ತಮ್ಮ ಕುಟುಂಬಕ್ಕಾಗಿ ಬಳಸಿಕೊಳ್ಳಲೇ ಇಲ್ಲ ಮಿರ್ಜಾ ಅವರು ಒಂದು ಸಾರಿ ಏನು ಬೇಕೂಂತ ಕೇಳಿದಾಗ, ಇವರೊಂದು ಹಾಸ್ಟೆಲ್ ಮಾಡಿದ್ದರಲ್ಲ. ಅದಕ್ಕೆ ಈಗಿದೆಯಲ್ಲ ಬಿಲ್ಡಿಂಗ್ ಅಲ್ಲಿ ಒಂದು ಹಳೇ ಟಿಬಿ ಇತ್ತು. ನಾಲ್ಕು ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲ ಆಗುತ್ತೆ ಅದನ್ನ ಕೊಡಿ ಅಂದರು. ಮದ್ದೂರಿನ ಹತ್ತ ಹೊಸ ಟಿಬಿ ಕಟ್ಟಿಸಿದ ಮೇಲೆ ಇದನ್ನು ಇವರಿಗೆ ಮಾರಿದರು. ಅಲ್ಲಿ ಹರಿಜನರ ಮಕ್ಕಳನ್ನೂ ಇರಿಸಿಕೊಂಡು ಶಿಕ್ಷಣ ಕೊಡಿಸಿದ್ದು ನಿಮಗೂ ಗೊತ್ತಿರಬೇಕು.

ಹರಿಜನರೂ ಮನುಷ್ಯರೇ, ಅವರಿಗೇಕೆ ಬೇರೆ ಟ್ರೀಟ್ಮೆಂಟು ? ಅವರೂ ಓದಿ ವಿದ್ಯಾವಂತರಾದರೆ ಬೇರೆಯವರ ಹಾಗೇನೆ ಆತ್ಮವಿಶ್ವಾಸದಿಂದ ಬದುಕಬಲ್ಲರು ಅನ್ನೋ ದೃಢನಂಬಿಕೆ ಅಪ್ಪಾರದು. ಒಂದು ಸಲ ಹರಿಜನರನ್ನ ಊರಿಂದಾಚೆ ದೂರ ಹಾಕಿಸಬೇಕು ಅಂತ ಊರಿನ ಜನ ಮುಂದಾಗಿದ್ದರು, ಆಗ ನಮ್ಮ ತಂದೆಯವರು ಹೋರಾಟವನೇ ಮಾಡಿ ಊರಿನಲ್ಲೇ ಇರಿಸಿಕೊಂಡರು. ಹರಿಜನರ ಕೇರಿಗೆ ರಾಮಮಂದಿರವನ್ನೂ ಕಟ್ಟಿಸಿಕೊಟ್ಟರು.

ಗಾಂಧೀಜಿಯವರು ಮೈಸೂರಿಗೆ ಬರುವ ಸುದ್ದಿ ಬಂದಾಗ ನಮ್ಮೂರಿನಲ್ಲೂ ಹಬ್ಬದ ಸಂಭ್ರಮ, ಹರಿಜನರ ಕೇರಿಗೆಲ್ಲ ಸುಣ್ಣ ಬಳಸಿ, ರಸ್ತೆಯೆಲ್ಲ ಚೊಕ್ಕಟ ಮಾಡಿ ರಂಗೋಲೆ ಹಾಕಿದ್ದರಂತೆ, ಗಾಂಧೀಜಿಯವರು ನಮ್ಮ ಹಾಸ್ಟೆಲ್‌ಗೆ ಬಂದಿದ್ದರಲ್ಲ ಆಗ 300–400 ಜನ ಸೇರಿದ್ದರು. ಮಹಾತ್ಮಾಗಾಂಧಿಜೀಯವರದು ಅದೇನು ಉತ್ಸಾಹ, ಮಕ್ಕಳ ಲವಲವಿಕೆ, ಅವರು ಹಿಂದಿಯಲ್ಲಿ ಮಾತಾಡಿದರು. ಅದನ್ನು ವಿ. ವೆಂಕಟಪ್ಪನವರು ಕನ್ನಡಕ್ಕೆ ತರ್ಜುಮೆ ಮಾಡಿದರು. ಹರಿಜನರಿಗೆ ಹೀಗೆ ಮೆಚ್ಚುಗೆ ಸೂಚಿಸಿದರು. ಆಗ ಎಲ್ಲ ಕಡೆ ಸಂಭ್ರಮ, ಹರಿಜನರಿಗೂ ಖಾದಿ ಕೋಟು, ಷರಟು, ಪಂಚೆ ಕೊಟ್ಟಿದ್ದರು.

ಇಷ್ಟೆಲ್ಲಾ ಜನಪ್ರಿಯತೆ ಇದ್ದರೂ ಪ್ರಭುಗಳ ಪ್ರೀತಿ ಇದ್ದರೂ ನಮ್ಮ ತಂದೆಯವರು ಬಯಸಿದ್ದರೆ ತಾವೇ ಮಿನಿಸ್ಟರ್ ಆಗಬಹುದಿತ್ತು. ಎಂಥಾ ಸಂಕೋಚ ಸ್ವಭಾವದವರೂ ಅಂದ್ರೆ ಏನಾದರೂ ತನಗಾಗಿ ಕೇಳಿದರೆ ಎಲ್ಲಿ ತಪ್ಪು ತಿಳಿದುಕೊಳ್ಳುತ್ತಾರೋ ಅಂತ ಏನೂ ಕೇಳುತ್ತಿರಲಿಲ್ಲ. ನಮ್ಮ ಯಜಮಾನರಿಗೆ ಅಮಲ್ದಾರ್ ಆಗಬೇಕೂಂತ ಆಸೆ ಇತ್ತು. ನಮ್ಮ ತಂದೆ ನಾನಂತೂ ಯಾರನ್ನೂ ಕೇಳೋಲ್ಲ. ಬೇಕಾದರೆ ಪರೀಕ್ಷೆ ಬರೆದು ಅಮಲ್ದಾರ್ ಆಗಲಿ ಅಂದು ಬಿಟ್ಟರು. ಕಡೆಗೆ ಆದದ್ದೂ ಹಾಗೆಯೇ.

ಹಣಕಾಸಿನ ಲೆಕ್ಕಾಚಾರದ ವಿಷಯದಲ್ಲಿ ನಮ್ಮಪ್ಪಯ್ಯ ಬಹಳ ಕರಾರುವಾಕ್ಕು. ದೊಡ್ಡ ದೊಡ್ಡ ಪುಸ್ತಕಗಳನ್ನಿಟ್ಟು ಲೆಕ್ಕ ಬರಯೋರು. ಎಲ್ಲಕ್ಕೂ ಬೇರೆ ಬೇರೆ ಲೆಕ್ಕ, ಕೊನೆಗೆ ಮದ್ರಾಸಿಗೆ ಹೋಗೋವಾಗಲೂ ಚಿಕ್ಕೆಂಪಯ್ಯ ಅಂತ ಮೇಷ್ಟ್ರಿದ್ರು. ಅವರ ಹತ್ರ ಯಾರು ಯಾರಿಗೆ ಯಾವ್ಯಾವುದಕ್ಕೆ ಎಷ್ಟೆಷ್ಟು ಕೊಡಬೇಕೂಂತ ಲೆಕ್ಕ ಮಾಡಿಸಿ ಬರೆದಿಟ್ಟು ಹೋದರು.

ಯಾರ ಋಣವೂ ನಮ್ಮ ತಂದೆಯವರ ಮೇಲೆ ಉಳಿಯಲಿಲ್ಲ, ಮದರಾಸಿಗೆ ಹೋದರು ಅಂದೆನಲ್ಲ ಅದೇ ಕೊನೆ. ಮತ್ತವರು ವಾಪಸ್ಸು ಬರಲಿಲ್ಲ. ಡಾ. ನಂಬಿಯಾರ್ ಅಂತ ಅವರು ಥೈರಾಯ್ಡ್‌ಗೆ ಟ್ರೀಟ್ ಮಾಡಿದರು. ಬುಧವಾರ ಅಪರೇಷನ್ ಆಯ್ತು. ಗುರುವಾರ ನಮಗೆ ಸುದ್ದಿ ಬಂತು ಅಪರೇಷನ್ ಸಕ್ಸಸ್ ಆಯ್ತುಂತೇಂತ. 1952 ಆಕ್ಟೋಬರ್ 5ನೇ ತಾರೀಖು, ಅವತ್ತೇ ಮಧ್ಯಾಹ್ನ 12 ಗಂಟೆಗೆ ಹೋಗಿಬಿಟ್ಟರು. (ಕಣ್ಣೀರು ಮಿಡಿಯತೊಡಗಿತು).

ನಮ್ಮಪ್ಪಯ್ಯ ಯಾರಿಗೂ ಕೇಡು ಮಾಡಿದವರಲ್ಲ. ಯಾರ ಮೇಲೂ ದ್ವೇಷದ ಕತ್ತಿ ಮಸೆದವರಲ್ಲ. ಹೃದಯ ಪೂರಕವಾಗಿ ಜನತೆಯ ಸೇವೆ ಮಾಡಿದ್ದಾರೆ. ಈವತ್ತು ನಾಲ್ಕು ಜನರ ಹೃದಯದಲ್ಲಿ ಮಲ್ಲಯ್ಯನವರು ನೆನಪಾಗುಳಿದಿದ್ದರೆ ಅದಕ್ಕೆ ಅವರ ಹೃದಯವಂತಿಕೆಯೇ ಕಾರಣ.

# ಸಾತ್ವಿಕಜೀವ ಮಲ್ಲಯ್ಯ

**ಜಿ. ನಾರಾಯಣ**

ಎಸ್.ಸಿ. ಮಲ್ಲಯ್ಯನವರು ತುಂಬಾ ಸಾತ್ವಿಕರು. ಸಂಕೋಚ ಸ್ವಭಾವದವರು. ರಾಜ ದರ್ಬಾರಿಗೆ ಹತ್ತಿರದವರಾಗಿದ್ರೂ ತೀರಾ ಸರಳ ಜೀವಿ. ನೀವು ನಂಬದೇ ಇರಬಹುದು, ಸೈಕಲ್ ಹತ್ತಿ ಹಳ್ಳಿ ಹಳ್ಳಿಗೆಲ್ಲ ಹೋಗೋರು. ಯಾವಾಗಲೂ ಶುಭ್ರವಾದ ಕಚ್ಚೆ ಕೋಟು, ಪೇಟ ಹಾಕಿಕೊಳ್ಳುತ್ತಿದ್ದರು.

ಮಲ್ಲಯ್ಯನವರದು ಸೋಮನಹಳ್ಳಿ, ನಮ್ಮದು ದೇಶಹಳ್ಳಿ. ಎರಡಕ್ಕೂ ಮಧ್ಯೆ ರೈಲ್ವೆ ಹಳಿಗಳು. ನಾನು ನಮ್ಮೂರಿನಲ್ಲೇ ಪ್ರೈಮರಿ ಸ್ಕೂಲ್ನಲ್ಲಿ ಓದಿ ಮುಗಿಸಿದೆ. ಮಿಡ್ಲ್ ಸ್ಕೂಲ್‌ಗೆ ಮದ್ದೂರಿಗೇ ಹೋಗಬೇಕಾಗಿತ್ತು. ನನ್ನ ಸೋದರಮಾವ ತಮ್ಮಯ್ಯನವರೂಂತ, ಅವ್ರು ನನ್ನನ್ನು ಮದ್ದೂರು ಸ್ಕೂಲಿಗೆ ಸೇರಿಸೋದಕ್ಕೇಂತ ಕರೆದುಕೊಂಡು ಹೋದರು. ಅಲ್ಲಿ ಮುಖ್ಯೋಪಾಧ್ಯಾಯರು ಶ್ರೀಕಂಠಯ್ಯನವರು ಅಂತ ಇದ್ರು. ನಾವು ಹೋದಾಗ ಅವರು ಅಡ್ಮಿಷನ್ ಟೈಮ್ ಆಗೋಗಿದೆ, ನಿಮ್ಮ ಹುಡುಗನ್ನ ಸೇರಿಸಿಕೊಳ್ಳೋಕ್ಕಾಗಲ್ಲ ಅಂದುಬಿಟ್ಟರು. ಆಗ ಮಲ್ಲಯ್ಯನವರು ಸೆಲೆಕ್ಷನ್ ಕಮಿಟಿ ಚೇರ್‌ಮನ್ ಆಗಿದ್ದರು. ನಮ್ಮ ಸೋದರಮಾವ ನನ್ನನ್ನು ಅವರ ಹತ್ರ ಕರಕೊಂಡು ಹೋಗಿ ಒಂದು ಸೀಟ್ ಕೊಡಿಸುವಂತೆ ಕೇಳಿಕೊಂಡರು. ಮಲ್ಲಯ್ಯನವರಿಗೆ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಹೀಗೆ ಸ್ವಂತ ಆಸಕ್ತಿಯಿಂದ ಓದೋದಕ್ಕೆ ಮುಂದೆ ಬಂದರೆ ಇಷ್ಟವಾಗೋದು. ತುಂಬಾ ಸಂತೋಷದಿಂದ ಒಂದು ಪತ್ರ ಕೊಟ್ಟರು. ನಾನು ಸ್ಕೂಲಿಗೆ ಸೇರಿದೆ.

ಕೆಲವು ವರ್ಷಗಳ ನಂತರ ಅವರು ಮೈಸೂರಿನ ಕೆ.ಆರ್. ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೀತಿದ್ದರು. ಅವರನ್ನು ನೋಡಬೇಕು ಅನ್ನೋ ಆಸೆ ಹತ್ತಿಕ್ಕಲಾರದೆ ಅಲ್ಲಿಗೆ ಹೋದೆ. ಮಲಗಿದ್ದರು. ಯಾರು? ಅಂದರು. ನಾನು ಜಿ. ನಾರಾಯಣ ಅಂತ. ದೇಶಹಳ್ಳಿಯವ. ನೀವು ನನಗೆ ಮದ್ದೂರಿನ ಮಿಡ್ಲ್ ಸ್ಕೂಲಿಗೆ ಸೀಟು ಕೊಡಿಸಿ ಉಪಕಾರ ಮಾಡಿದ್ದಿರಿ ಅಂದೆ. ತುಂಬಾ ಸಂತೋಷಪಟ್ಟರು. ಸ್ವಭಾವತಃ ತುಂಬಾ ಒಳ್ಳೆಯೋರು ಮಲ್ಲಯ್ಯನವರು, ಅವರ ಮಗ ಕೃಷ್ಣ ಅವರಿಗೂ ಅದೇ ಸ್ವಭಾವವಿದೆ ಅನ್ನೋದು ನನ್ನ ನಂಬಿಕೆ. ಯಾರನ್ನೂ ಬಯ್ಯುತ್ತಿರಲಿಲ್ಲ. ಗಟ್ಟಿಯಾಗಿ ಮಾತಾಡುತ್ತಿರಲಿಲ್ಲ, ಮಲ್ಲಯ್ಯನವರು.

ಮಲ್ಲಯ್ಯನವರು ಸಾಮಾಜಿಕವಾಗಿ ಸಕ್ರೀಯರಾಗಿದ್ದ ಕಾಲ ಏನಿತ್ತು, ಅದು ಬ್ರಿಟಿಷರ ಆಳ್ವಿಕೆಯ ಕಾಲ. ರಾಜಾಡಳಿತ ಕೂಡ. ಬ್ರಿಟಿಷರ ಅಧೀನದಲ್ಲೇ ಇದ್ದುಕೊಂಡು ಆಳ್ವಿಕೆ ಮಾಡಬೇಕಿತ್ತು. ಮಹಾರಾಜರು ದಿವಾನರ ಮೂಲಕ ಜನರ ಕೆಲಸ ಮಾಡಿಸೋರು. ತಾಲ್ಲೂಕುಗಳಲ್ಲಿ ಒಬ್ಬೊಬ್ಬರು ಮುಖ್ಯಸ್ಥರಿದ್ದು ಅವರು ದಿವಾನರೊಂದಿಗೆ ಮಾತನಾಡಿ, ಚರ್ಚಿಸಿ ತಮ್ಮ ಪ್ರದೇಶದ ಅಭಿವೃದ್ಧಿ

ಕಾರ್ಯಗಳನ್ನು ಮಾಡೋರು. ಮದ್ದೂರು ತಾಲ್ಲೂಕಿನ ಮುಖ್ಯಸ್ಥರಾಗಿ ಮಲ್ಲಯ್ಯನವರು ದಿವಾನ್ ಮಿರ್ಜಾ ಇಸ್ಮಾಯಿಲ್ ಅವರ ಮೂಲಕ ಸರ್ಕಾರವನ್ನು ಒಲ್ಯೆಸಿ ಜನಪರ ಕೆಲಸಗಳನ್ನು ತುಂಬಾ ಯಶಸ್ವಿಯಾಗಿ ನಿರ್ವಹಿಸುತ್ತಿದ್ದದಕ್ಕೆ ಅವರ ಜನಪರ ಕಾಳಜಿ, ದಕ್ಷತೆ, ಪ್ರಾಮಾಣಿಕತೆ ಜೊತೆಗೆ ಅವರು ದಿವಾನರೊಂದಿಗೆ ಹೊಂದಿದ್ದ ಸ್ನೇಹ ಕೂಡ ಕಾರಣವಾಗಿತ್ತು ಅನ್ನೋದು ನನ್ನ ಅಭಿಪ್ರಾಯ.

ರಾಜಾಳ್ವಿಕೆ ನಡೆಯುತ್ತಿದ್ದ ಆ ಕಾಲದಲ್ಲಿ ದಿವಾನರು ಎಲ್ಲಾ ಪ್ರದೇಶಗಳಿಗೂ ಭೇಟಿ ಕೊಟ್ಟು ಸ್ವತಃ ತಾವೇ ಪರಿಶೀಲನೆ ನಡೆಸ್ತಾ ಇದ್ರು. ಅವರು ಬೆಂಗಳೂರಿನಿಂದ ಮೈಸೂರಿಗೆ, ಮೈಸೂರಿನಿಂದ ಬೆಂಗಳೂರಿಗೆ ಓಡಾಡೋ ಮಾರ್ಗದಲ್ಲಿ ರಾಮನಗರ, ಚನ್ನಪಟ್ಟಣ, ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ ಇವೆಲ್ಲ ಮುಖ್ಯ ತಾಲ್ಲೂಕುಗಳನ್ನು ಹಾದು ಹೋಗೋರು. ಆಗ ಮಿರ್ಜಾ ಇಸ್ಮಾಯಿಲ್ ದಿವಾನರಾಗಿದ್ದರಲ್ಲ ಅವರು ಬೆಂಗಳೂರಿನಿಂದ ಎಷ್ಟು ಗಂಟೆಗೆ ಹೊರಡ್ತಾರೆ, ಎಷ್ಟು ಗಂಟೆಗೆ ಯಾವ ತಾಲ್ಲೂಕನ್ನು ಹಾದು ಹೋಗ್ತಾರೆ ಅಂತ ಮೊದಲೇ ಸಂದೇಶವನ್ನು ತಾಲ್ಲೂಕು ಮುಖ್ಯಸ್ಥರಿಗೆ ಮುಟ್ಟಿಸಲಾಗಿರುತ್ತಿತ್ತು. ಆಗ ಅವರುಗಳು ತಮ್ಮ ತಮ್ಮ ತಾಲ್ಲೂಕಿನಲ್ಲಿ ಬೆಂಗಳೂರು – ಮೈಸೂರು ಹೆದ್ದಾರಿಯಲ್ಲೇ ದಿವಾನರನ್ನ ಎದುರ್ಗೊಂಡು ಹಾರ – ತುರಾಯಿ ಅರ್ಪಿಸಿ ತಮ್ಮ ಗೌರವ ಸೂಚಿಸೋದು ಪದ್ಧತಿಯಾಗಿತ್ತು. ಎಲ್ಲರೂ ಹಾಗೇ ಮಾಡೋರು. ಆದರೆ ಮದ್ದೂರಿನ ಮಲ್ಲಯ್ಯನವರ ಮನೆಗೆ ಮಾತ್ರ ಮಿರ್ಜಾ ಅವರು ಬೆಂಗಳೂರಿಗೆ ಹೋಗುವಾಗ ಬರೋವಾಗೆಲ್ಲ ಭೇಟಿ ನೀಡಿ ಕಾಫೀ – ತಿಂಡಿ ಏನೋ ಒಂದು ಆತಿಥ್ಯ ಸ್ವೀಕರಿಸಿ ಮುಂದೆ ಹೋಗೋರು. ಅಷ್ಟು ವಿಶ್ವಾಸ ಮಿರ್ಜಾ ಅವರಿಗೆ ಮಲ್ಲಯ್ಯನವರನ್ನು ಕಂಡ್ರೆ. ಮಲ್ಲಯ್ಯನವರಿಗೂ ಮಿರ್ಜಾರನ್ನ ಕಂಡ್ರೆ ಭಕ್ತಿ – ಗೌರವ ತುಂಬಾನೇ ಇತ್ತು. ಈ ಮಾತನ್ನು ಯಾಕೆ ಹೇಳ್ತೀನಿ ಅಂದ್ರೆ ಆಳುವವರ ಜೊತೆಗೆ ಮಲ್ಲಯ್ಯನವರು ಇಂಥ ನಿಕಟತೆಯನ್ನು ಹೊಂದಿದ್ದರಿಂದಲೇ ಮದ್ದೂರು ಮತ್ತು ಇಡೀ ಮಂಡ್ಯ ಜಿಲ್ಲೆಗೇ ಒಳ್ಳೆ ಕೆಲಸಗಳನ್ನು ಮಾಡ್ಲೋದಕ್ಕೆ ಸಾಧ್ಯವಾಗ್ತಾ ಇತ್ತು.

ಬ್ರಿಟಿಷರ ಪರೋಕ್ಷ ಅಧೀನತೆಗೆ ಆಳರಸರು ಒಳಗಾಗಿದ್ದರೂ, ಆಳರಸರ ಸಂಪರ್ಕದಲ್ಲೇ ಮಲ್ಲಯ್ಯನವರಿದ್ದರೂ, ಅವರೆಂದೂ ಬ್ರಿಟಿಷ್ ಪರ ನಿಲುವುಗಳನ್ನು ಹೊಂದಿದವರಾಗಿರಲಿಲ್ಲ. ಜೊತೆಗೆ ಗಾಂಧೀಜಿಯವರ ನಿಲುವುಗಳನ್ನು ಒಪ್ಪುತ್ತಿದ್ದರಾದರೂ, ಎಷ್ಟೋ ಮಟ್ಟಿಗೆ ಅವನ್ನು ಪಾಲಿಸುತ್ತಿದ್ದರಾದರೂ ಅವರು ಕಾಂಗ್ರೆಸ್ನೊಳಗೂ ಇರಲಿಲ್ಲ. ಯಾಕೆಂದರೆ ಆ ಕಾಲವೇ ಹಾಗಿತ್ತು. ಪಕ್ಷ ಕಟ್ಟುವ ಕಾಲವಾಗಿರಲಿಲ್ಲ ಅದು. ಸಾಮಾಜಿಕ ಕಳಕಳಿಯಿಂದ ಏನಾದರೂ ಕೆಲಸ ಮಾಡಬೇಕೆಂದೆನಿಸಿದ್ದರೆ ಅದನ್ನು ಸರ್ಕಾರವನ್ನು ಒಲ್ಯೆಸಿ, ಸರ್ಕಾರದ ಮೂಲಕವೇ ಮಾಡಬೇಕಾಗಿತ್ತು. ರಾಜಕೀಯ ಪಕ್ಷಗಳಿಗೆ ಅಧಿಕಾರ ಸಾಧ್ಯವಿಲ್ಲದ ಕಾಲ. ದಕ್ಷಿಣ ಭಾರತದಲ್ಲಿ ಗಾಂಧೀಜಿಯವರ ಪ್ರಭಾವವೂ ಆಗಷ್ಟೇ ಮೆಲ್ಲನೆ ಹರಡುತ್ತಿತ್ತು. ಹಾಗಾಗಿ ಗಾಂಧೀವಾದಗಳನ್ನು ಒಪ್ಪುತ್ತಿದ್ದರಾದರೂ

ಮಲ್ಲಯ್ಯನವರು ಜನಪರ ಕೆಲಸ ಮಾಡಿಸುವುದಕ್ಕಾಗಿ ಸರ್ಕಾರವನ್ನೇ ಅವಲಂಬಿಸುತ್ತಿದ್ದರು. ಅದು ಆ ಕಾಲಮಾನದ ಅನಿವಾರ್ಯತೆ.

ಇಂಥ ಇತಿಮಿತಿಗಳ ನಡುವೆಯೂ, ಗಾಂಧೀಜಿಯವರನ್ನು ಕಂಡರೆ ಮಲ್ಲಯ್ಯನವರಿಗೆ ತುಂಬಾ ಇಷ್ಟ ಇರೋದು. ಅಸ್ಪೃಶ್ಯತೆಯ ನಿವಾರಣೆ, ಹರಿಜನ ಮಕ್ಕಳೂ ಓದಬೇಕು ಅನ್ನೋ ಸಾಮಾಜಿಕ ಕಾಳಜಿ ಮಲ್ಲಯ್ಯನವರದೂ ಆಗಿತ್ತು. ಗಾಂಧೀಜಿಯವರು ಪ್ರತಿಪಾದಿಸುತ್ತಿದ್ದ ಪಾನ ನಿರೋಧ ನೀತಿಯನ್ನು ಮಲ್ಲಯ್ಯನವರೂ ಒಪ್ಪುತ್ತಿದ್ದರು. ಮಿರ್ಜಾ ಇಸ್ಮಾಯಿಲ್ ಅವರೂ ಪಾನ ನಿರೋಧವನ್ನು ಬೆಂಬಲಿಸುತ್ತಿದ್ದದ್ದರಿಂದಲೂ ಮಲ್ಲಯ್ಯನವರು ಮದ್ಯಪಾನ ತಡೆಯಲು ಜನ ಜಾಗೃತಿ ಮೂಡಿಸುವ ಕೆಲಸ ಮಾಡುತ್ತಿದ್ದರು. ಈ ಕೆಲಸವನ್ನು ಎಷ್ಟರ ಮಟ್ಟಿಗೆ ಮಲ್ಲಯ್ಯನವರು ಮಾಡುತ್ತಿದ್ದರೆಂದರೆ, ಸ್ವತಃ ತಾವೇ ಹರಿಜನರ ಕೇರಿಗಳಿಗೆ ಹೋಗಿ ಮದ್ಯ ಕುಡಿಯದಂತೆ ಜನರಿಗೆ ತಿಳುವಳಿಕೆ, ಎಚ್ಚರಿಕೆ ನೀಡೋರು.

ಇಷ್ಟೆಲ್ಲದರ ಜೊತೆಗೆ ಜನರಿಗೆ ಶಿಕ್ಷಣ ಲಭಿಸದ ಹೊರತು ಜನರಲ್ಲಿ ಸಾಮಾಜಿಕ ಕಾಳಜಿ, ಜಾಗೃತಿ ಮೂಡುವುದಿಲ್ಲ ಎಂದವರು ಅರಿತಿದ್ದರು. ವಯಸ್ಕರ ಶಿಕ್ಷಣವನ್ನೂ ಅವರು ಬೆಂಬಲಿಸುತ್ತಿದ್ದರು. ಆಗಿನ ವಯಸ್ಕರ ಶಿಕ್ಷಣ ಸಮಿತಿಯ ಸದಸ್ಯರಾಗಿಯೂ ಅವರು ಸೇವೆ ಸಲ್ಲಿಸಿದ್ದರು. ಆಗ ಮೈಸೂರು ಸ್ಟೇಟ್ ರೈಲ್ವೆ ಅಂತ ಇತ್ತು. ಎಲ್ಲದರ ಮೇಲೂ ಒಂಥರಾ ಬ್ರಿಟಿಷ್ ಅಧಿಪತ್ಯವೇ ನೋಡಿ. ಹಾಗಾಗಿ ರೈಲ್ವೆ ಸಿಬ್ಬಂದಿಯ ಕುಂದುಕೊರತೆಗಳ ಬಗ್ಗೆಯೂ ಮಲ್ಲಯ್ಯನವರು ಗಮನ ಹರಿಸುತ್ತಿದ್ದರು.

ಮಲ್ಲಯ್ಯನವರು ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರಲ್ಲ ಆವಾಗ ವಿಧಾನ ಸಭೆಯಲ್ಲಿ ಈ ವಿಚಾರಗಳನ್ನೆಲ್ಲ ಪ್ರಸ್ತಾಪ ಮಾಡುತ್ತಿದ್ದರು. ಅವರು ನನಗೆ ತಿಳಿದ ಮಟ್ಟಿಗೆ 1926ರ ವೇಳೆಗಾಗಲೇ ಪ್ರಜಾಪ್ರತಿನಿಧಿ ಸಭೆ ಸೇರಿದ್ದರು. ನಾನಾಗ ಐದಾರು ವರ್ಷದ ಬಾಲಕ. ಆ ಕಾಲದ ಬಗ್ಗೆ ಅಷ್ಟಾಗಿ ತಿಳಿದಿಲ್ಲ. ಆದರೆ ಶಿಕ್ಷಣ, ಕುಡಿಯುವ ನೀರು, ನೀರಾವರಿ, ಮದ್ಯಪಾನ ನಿರೋಧ ಮುಂತಾದ ವಿಷಯಗಳಲ್ಲಿ ಮಲ್ಲಯ್ಯನವರು ಮೌಲ್ಯಿಕ ಕೆಲಸ ಮಾಡಿದ್ದಾರೆಂದು ನಾನು ತಿಳಿದು ಬಲ್ಲೆ.

1952ರಲ್ಲಿ ಚುನಾವಣೆ ನಡೆದದ್ದು ನನಗೆ ಚೆನ್ನಾಗಿ ನೆನಪಿದೆ. ಇದೇ ನಮ್ಮ ಮೊಟ್ಟ ಮೊದಲ ಸಾರ್ವತ್ರಿಕ ಚುನಾವಣೆ. ಆಗ ತಾನೇ ಸ್ವಾತಂತ್ರ್ಯ ಬಂದ ಹೊಸತು ನೋಡಿ. ಕಾಂಗ್ರೆಸ್ ಬಹಳ ಪ್ರಭಾವಶಾಲಿಯಾಗಿತ್ತು. ಈಗಿನ ಮಾತಲ್ಲಿ ಹೇಳೋದಾದರೆ ಕಾಂಗ್ರೆಸ್ ಪರ ಅಲೆ ಇತ್ತು. ಜನರ ಈ ನಂಬಿಕೆಯಿಂದಾಗಿ ಎಲ್ಲ ಕಡೆ ಕಾಂಗ್ರೆಸ್ ಅಭ್ಯರ್ಥಿಗಳು ವಿಜಯ ಸಾಧಿಸಿದರು. ಮದ್ದೂರಿನಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅಭ್ಯರ್ಥಿಯಾಗಿದ್ದ, ಪಕ್ಷದ ಕಾರ್ಯದರ್ಶಿ ಹೆಚ್.ಕೆ. ವೀರಣ್ಣ

ಗೌಡರು ಗೆದ್ದರು. ಆದರೆ ಮಲ್ಲಯ್ಯನವರ ಈ ಸೋಲು ಅವರ ವೈಯಕ್ತಿಕ ಸೋಲಲ್ಲ ಎನ್ನುವುದೂ ನನ್ನ ಭಾವನೆ. ಅಲ್ಲಿಂದಾಚೆಗೆ ಬಹುಶಃ ಆರೇಳು ತಿಂಗಳಲ್ಲೇ ಅವರು ನಿಧನ ಹೊಂದಿದರು. ಹಾಗಾಗಿ ಯಾವುದೇ ರಾಜಕೀಯ ಪಕ್ಷದ ಮೂಲಕ ಅಧಿಕಾರ ಹಿಡಿಯುವ ಅವಕಾಶ, ಅದರಲ್ಲೂ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಕೆಲಸ ಮಾಡುವ ಅವಕಾಶ ಮಲ್ಲಯ್ಯನವರಿಗೆ ಲಭಿಸಲೇ ಇಲ್ಲ.

ವೈಯಕ್ತಿಕವಾಗಿ ನನಗೆ ಮಲ್ಲಯ್ಯನವರ ಬಗ್ಗೆ ಅಪಾರ ಗೌರವ. ನಾನು ಅವರಿಗಿಂತ ಬಹಳ ಕಿರಿಯ. ನಾನು ಹುಟ್ಟುವ ವೇಳೆಗಾಗಲೇ ಅವರು ಪ್ರವರ್ಧಮಾನದಲ್ಲಿದ್ದರು. ಜೊತೆಗೆ ನಾನು ಕಾಂಗ್ರೆಸ್ ಪಕ್ಷದ ಸ್ವಯಂ ಸೇವಕನಂತೆ ಸ್ವಾತಂತ್ರ್ಯ ಹೋರಾಟಕ್ಕೆ ಇಳಿದು ಬಿಟ್ಟೆನಲ್ಲ, ಈ ಕಡೆ ಬೆಂಗಳೂರಿಗೆ ಬಂದುಬಿಟ್ಟೆ. ಮದ್ದೂರಿನಲ್ಲಿದ್ದು ಅವರ ಸಂಪರ್ಕ ಹೊಂದುವುದು ಆಗಲಿಲ್ಲ. ಆದರೆ ಮಲ್ಲಯ್ಯನವರು ಮಾಡುತ್ತಿದ್ದ ಜನಪರ ಕೆಲಸಗಳನ್ನು ಮಾತ್ರ ಹತ್ತಿರದಿಂದ ಗಮನಿಸುತ್ತಿದ್ದೆ.



# ಅವರ ಕೀರ್ತಿ ಅವರಿಗೇ ಸಲ್ಲಬೇಕು

## ಪ್ರೊ. ದೇ. ಜವರೇಗೌಡ

♦ **ಎಸ್.ಸಿ. ಮಲ್ಲಯ್ಯನವರನ್ನು ನೀವು ಹೇಗೆ ಬಲ್ಲಿರಿ?**

* ಆಗವರು ಮೈಸೂರಿನ ಪ್ರಮುಖ ನಾಯಕರು. ಅವರ ಬಗ್ಗೆ ಪೇಪರ್‌ನಲ್ಲಿ ಬರುತ್ತಿದ್ದದ್ದನ್ನು ಓದುತ್ತಾ ಇದ್ದೆವು. ಅವರು ಜನಹಿತಕ್ಕಾಗಿ ಮಾಡುತ್ತಿದ್ದ ಕೆಲಸ ಕಾರ್ಯಗಳೇ ಇರಲಿ, ಮೈಸೂರಿಗೆ ಬಂದಿದ್ದ ಗಾಂಧೀಜಿಯವರು ಸೋಮನಹಳ್ಳಿಗೆ ಹೋಗಿದ್ದೇ ಆಗಲಿ ಎಲ್ಲ ಆಗ ಪತ್ರಿಕೆಗಳಲ್ಲಿ ಬರೋದು. ಆಮೇಲೆ 1943ರಿಂದ 46ರವರೆಗೆ ನಾನೂ ಸ್ಪೆಷಲ್ ರೆವಿನ್ಯೂ ಡಿಪಾರ್ಟ್‌ಮೆಂಟ್‌ನಲ್ಲಿ ಗುಮಾಸ್ತನಾಗಿ ಕೆಲಸ ಮಾಡ್ತಾ ಇದ್ದೆ. ಆಗ ಅಸೆಂಬ್ಲಿಗೆ ಹೋಗಬೇಕಾಗಿತ್ತು. ಅಲ್ಲಿ ಅವರನ್ನು ಹತ್ತಿರದಿಂದ ನೋಡಿದ್ದು ಚೆನ್ನಾಗಿ ಜ್ಞಾಪಕ ಇದೆ. ನಾ ಕಂಡ ಹಾಗೆ ಅವರು ಯಾವಾಗಲೂ ಅಸೆಂಬ್ಲಿಯಲ್ಲಿ ಮೊದಲ ಸಾಲಿನಲ್ಲೇ ಇರ್ತಾ ಇದ್ರು. ಮಧ್ಯ ವಯಸ್ಸು ದಾಟಿತ್ತು. ತುಂಬಾ ಸೌಮ್ಯ ವ್ಯಕ್ತಿ. ಸದನದ ಕಲಾಪಗಳಲ್ಲಿ ಹಿಡಿದ ಪಟ್ಟು ಬಿಡದೆ ವಾಗ್ಪಟುತ್ವ ಮೆರೆದರೂ, ಸಜ್ಜನಿಕೆಯ ಜಾಡು ಮರೆಯುತ್ತಿರಲಿಲ್ಲ.

♦ **ಪ್ರಮುಖ ನಾಯಕರಾಗಿ ಮಲ್ಲಯ್ಯನವರು ಹೊಂದಿದ್ದ ಸಾಮಾಜಿಕ ಕಳಕಳಿಯನ್ನು ನೀವು ಹೇಗೆ ಚಿತ್ರಿಸಬಹುದು?**

* ಒಂದು ಜಿಲ್ಲೆಯಾಗಿ ಮಂಡ್ಯ ನಿರ್ಮಾಣವಾಯ್ತಲ್ಲ ಅದಷ್ಟೇ ಸಾಕು ಮಲ್ಲಯ್ಯನವರ ಸಾಮಾಜಿಕ ಕಳಕಳಿಯನ್ನು ಸ್ಪಷ್ಟವಾಗಿ ಹೇಳುವುದಕ್ಕೆ. ಆಗ ಮಂಡ್ಯ – ಜಿಲ್ಲೆಯಾಗಿರದಿದ್ದ ಮಂಡ್ಯ ಹೀನಾಯ ಸ್ಥಿತಿಯಲ್ಲಿತ್ತು. ಅಲ್ಲಿ ಸದಾಕಾಲ ಬರಗಾಲವೇ ಸರ್.ಎಂ. ವಿಯವರು, ಮಿರ್ಜಾ ಅವರು ಎಷ್ಟೇ ಸೌಲಭ್ಯ ಸೌಕರ್ಯ ಒದಗಿಸಲು ಮುಂದಾಗಿದ್ದರೂ, ಮಲ್ಲಯ್ಯನವರ ದೃಷ್ಟಿಯಲ್ಲಿ ಅದೊಂದು ಜಿಲ್ಲೆಯ ಸ್ವರೂಪ ಪಡೆಯದೆ ಮಂಡ್ಯದ ಅಭ್ಯುದಯ ಸಾಧ್ಯವಿಲ್ಲ ಅನ್ನೋದು ಸ್ಥಾಪಿತವಾಗಿತ್ತು. ಮಲ್ಲಯ್ಯನವರ ಈ ದೂರದೃಷ್ಟಿಗೆ ಅನೇಕರ ವಿರೋಧವೂ ಇತ್ತು. ಯಾಕೆಂದರೆ ಮಂಡ್ಯ, ಮೈಸೂರು ಜಿಲ್ಲೆಯಲ್ಲೇ ಇದ್ದರೆ ಮಹಾರಾಜರ್‍ರ ಕ್ರಪಾಕಟಾಕ್ಷ ಇದ್ದೇ ಇರುತ್ತದೆ, ಆಳುವವರ ನೇರ ಕೃಪೆಗೆ ಒಳಗಾಗುವುದರಿಂದ ಅಭಿವೃದ್ಧಿ ಕೆಲಸಗಳೂ ನಡೆಯುತ್ತವೆ ಎನ್ನುವುದು ಈ ಗುಂಪಿನ ಅಭಿಮತ. ಆದರೆ ಮಲ್ಲಯ್ಯನವರ ಪಟ್ಟು ಬಿಗಿಯಾಗಿತ್ತು. ಚಿಂತನೆ ಸಮರ್ಪಕವಾಗಿತ್ತು. ಇವರ ವಾದದ ಪ್ರಾಬಲ್ಯವನ್ನು ಅರಿತು, ಸರ್ ಮಿರ್ಜಾ ಅವರೂ ಸಹಕಾರ ನೀಡಿದರು. ಮಂಡ್ಯ ಸ್ವತಂತ್ರ ಜಿಲ್ಲೆಯಾಯಿತು.

ಪ್ರಜಾಪ್ರತಿನಿಧಿ ಸಭೆಯಲ್ಲೂ ಮಂಡ್ಯ ಜಿಲ್ಲೆ ರಚನೆಯ ಬಗ್ಗೆ ಒಮ್ಮತವಿರಲಿಲ್ಲ. ಕೃಷ್ಣಪ್ಪಗೌಡರು ಸಭೆಯಲ್ಲಿ ಜಿಲ್ಲಾರಚನೆ ಬಗ್ಗೆ ವಿರೋಧ ವ್ಯಕ್ತಪಡಿಸಿದರು. ಕೆಳಮನೆಯಲ್ಲಿ ಮಲ್ಲಯ್ಯನವರೂ,

ಮೇಲ್ಮನೆಯಲ್ಲಿ ಎಂ.ಸಿ. ಲಿಂಗೇಗೌಡರೂ ಜಿಲ್ಲಾ ರಚನೆ ಪರ ವಾದಿಸಿದರು. ಸಮಸ್ಯೆ ಅಲ್ಲಿ ಬಗೆಹರಿಯದೆ ಅಧ್ಯಕ್ಷ ಪೀಠದಲ್ಲಿದ್ದ ಮಿರ್ಜಾ ಅವರು ಕಲಾಪ ಮುಂದೂಡಿದರು. ಮುಂದಿನ ದಿನಗಳಲ್ಲಿ ಸಂಪುಟ ಸಭೆಯಲ್ಲಿ ತೀರ್ಮಾನಗೊಂಡು ಮಿರ್ಜಾ ಅವರೇ ಮಹಾರಾಜರ ಹತ್ತಿರ ತೆಗೆದುಕೊಂಡು ಹೋಗಿ ಸಹಿ ಮಾಡಿಸಿದರು. ಹೀಗೆ ಮಲ್ಲಯ್ಯನವರ ಹೋರಾಟ ಆಡಳಿತಾತ್ಮಕವಾಗಿಯೂ ಸಿಂಧುವಾಯಿತು. ಈವತ್ತಿಗೂ ಮಂಡ್ಯದ ಜನ ಮಲ್ಲಯ್ಯನವರನ್ನು ನೆನೆದುಕೊಳ್ಳಬೇಕು.

ಒಂದು ಪ್ರತ್ಯೇಕ ಜಿಲ್ಲೆಯಾಗಿದ್ದರಿಂದ ಮಂಡ್ಯ ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಬೆಳೆಯುವುದಕ್ಕೆ ಸಾಧ್ಯವಾಯಿತು. ಇದೊಂದು ನಿದರ್ಶನ ಸಾಕಲ್ಲವೇ ಮಲ್ಲಯ್ಯನವರ ಸಾಮಾಜಿಕ ಕಳಕಳಿಯ ತೀವ್ರತೆಯನ್ನು ತಿಳಿಸುವುದಕ್ಕೆ?

**◆ ಶಿಕ್ಷಣ ಕ್ಷೇತ್ರದಲ್ಲಿ ಮಲ್ಲಯ್ಯನವರ ತೊಡಗಿಸಿಕೊಳ್ಳುವಿಕೆ ಹೇಗಿತ್ತು?**

* ಜನರ ಮೌಢ್ಯ ಅಳಿಸುವುದಕ್ಕೆ ಶಿಕ್ಷಣವೊಂದೇ ಮೂಲ ಸಾಧನ ಎನ್ನುವುದು ಮಲ್ಲಯ್ಯನವರ ದೃಢನಂಬಿಕೆ. ಅದರಲ್ಲೂ ವೃತ್ತಿ ಶಿಕ್ಷಣಕ್ಕೆ ಅವರ ಒತ್ತಾಸೆ ಹೆಚ್ಚು. ಅವತ್ತಿನ ಮಟ್ಟಿಗೆ ಅದು ದೊಡ್ಡ ವಿಶೇಷ. ಈಗದರ ಮಹತ್ವ ಕಡಿಮೆಯಾಗಿರಬಹುದು. ಅದಲ್ಲದೆ ನಮ್ಮ ರೈತಾಪಿ ವರ್ಗದ ಜೀವನಾಡಿ ಕೃಷಿ ಆಗಿರುವುದರಿಂದ ಸೋಮನಹಳ್ಳಿ ಹತ್ತಿರ ಕೃಷಿ ಶಾಲೆ ಪ್ರಾರಂಭ ಮಾಡೋದಕ್ಕೂ ಅವರು ಕಾರಣವಾಗಿದ್ದರು. ಹಿಂದುಳಿದವರು, ದಲಿತರು ಶಿಕ್ಷಣದ ಪ್ರಯೋಜನ ಪಡೆಯಬೇಕೆಂಬುದು ಅವರ ಮನದಾಸೆಯಾಗಿತ್ತು. ದಲಿತರಿಗೆ ವಿದ್ಯಾಭ್ಯಾಸ ಕೊಡಿಸುವ ಬಗ್ಗೆ ಅವರಿಗೆ ಅತೀವ ಕಳಕಳಿ ಇತ್ತು. ದಲಿತೋದ್ಧಾರಕ್ಕೆ ಶಿಕ್ಷಣವೇ ಮದ್ದು ಎಂದವರು ಅಸೆಂಬ್ಲಿಯಲ್ಲೂ ವಾದಿಸುತ್ತಿದ್ದರು. ತಾವೇ ಮಾದರಿಯಾಗಿ ತಮ್ಮ ಹಾಸ್ಟೆಲ್‌ನಲ್ಲಿ ದಲಿತ ವಿದ್ಯಾರ್ಥಿಗಳನ್ನೂ ತಂದು ಸೇರಿಸಿಕೊಂಡರು.

◆ ಅದೇ ಅಲ್ಲವಾ ಮಹಾತ್ಮಾ ಗಾಂಧೀಯವರನ್ನೂ ಸೋಮನಹಳ್ಳಿ ಕಡೆ ಆಕರ್ಷಿಸಿದ್ದು?

* ಹೌದು, ಹೌದು...... 1934ರಲ್ಲಿ ಗಾಂಧೀಜಿ ಹರಿಜನ ಪ್ರವಾಸ ಅಂತ ದಲಿತರ ಉದ್ಧಾರಕ್ಕಾಗಿ ನಿಧಿ ಸಂಗ್ರಹಿಸಲು ಪ್ರವಾಸ ಹೊರಟು ಮೈಸೂರಿಗೆ ಬಂದಿದ್ದರು. ಆಗಲೇ ಬೆಂಗಳೂರಿಗೆ ಹೋಗುವ ಮಾರ್ಗದಲ್ಲಿ ಸೋಮನಹಳ್ಳಿಯ ಹಾಸ್ಟೆಲ್‌ನಲ್ಲಿ ದಲಿತ ವಿದ್ಯಾರ್ಥಿಗಳಿರುವುದೂ, ಹಳ್ಳಿಯಲ್ಲಿದ್ದ ದಲಿತ ಕೇರಿಯ ಶುಚಿತ್ವದ ವಿಚಾರ ತಿಳಿದು ಗಾಂಧೀಜಿಯವರು ಅದನ್ನು ನೋಡಬಯಸಿ ಹಾಸ್ಟೆಲ್‌ಗೆ ಭೇಟಿ ನೀಡಿದರು. ಹಾಗೆ ದಲಿತೋದ್ಧಾರಕ್ಕಾಗಿ ತಮ್ಮ ಭಿಕ್ಷಾಪಾತ್ರೆಯನ್ನೂ ತೆರೆದಿಟ್ಟರು.

ಆಗೇನಾಯಿತೂಂದ್ರೆ, ಮಲ್ಲಯ್ಯನವರ ಅಳಿಯ ವಿ.ಪಿ. ತಮ್ಮಯ್ಯ ಅಂತ. ಅವರು ಗಾಂಧೀಜಿಯವರ ಹಸ್ತಾಕ್ಷರ ಕೋರಿದರು. ಆಗ ಯಾರೇ ಆದರೂ ಹರಿಜನೋದ್ಧಾರಕ್ಕೆ ಅಂತ ನಾಲ್ಕಾಣೆ ನೀಡಿ ಗಾಂಧೀಜಿಯವರ ಹಸ್ತಾಕ್ಷರ ಪಡೆಯಬಹುದಾಗಿತ್ತು. ತಮ್ಮಯ್ಯನವರೂ ಹಾಗೇ ಮಾಡಬೇಕಾಗಿತ್ತು. ಆದರೆ ಅವರ ಹತ್ತಿರ ದುಡ್ಡಿರಲಿಲ್ಲ. ಏನೂ ಮಾಡಲು ತೋಚದೆ ಕಿವಿಯಲ್ಲಿದ್ದ ಹತ್ತಕಡಕನ್ನು ಬಿಚ್ಚಿ ಕೊಟ್ಟುಬಿಟ್ಟರು. ಗಾಂಧೀಜಿಯವರ ಹಸ್ತಾಕ್ಷರ ಸಿಕ್ಕಿತು.

◆ ದಲಿತೋದ್ಧಾರದ ವಿಷಯದಲ್ಲಿ ಮಲ್ಲಯ್ಯನವರ ಭಾವನೆಗಳನ್ನು ಹೇಳುತ್ತಿದ್ದಿರಿ....

* ಹೂಂ...... ಮಲ್ಲಯ್ಯನವರಿಗೆ ಇವರು ದಲಿತರು, ಅವರು ಮೇಲ್ವರ್ಗದವರು ಎನ್ನುವ ತಾರತಮ್ಯವೇನೂ ಇರಲಿಲ್ಲ. ಮುಂದುವರೆದವರ ಮೇಲೆ ದ್ವೇಷವೂ ಇರಲಿಲ್ಲ. ಹಿಂದುಳಿದವರೂ ಮುಂದುವರೆಯಲಿ ಎನ್ನುವ ಕಳಕಳಿಯಷ್ಟೇ. ದಲಿತರಾದರೇನು ಮನುಷ್ಯರಲ್ಲವೇ ಅಂತ ಅವರ human dignity ಯನ್ನು ಎತ್ತಿ ಹಿಡಿಯೋದಕ್ಕೆ ಪ್ರಯತ್ನ ಮಾಡ್ತಾ ಇದ್ದರು. ಮಾದ, ಸಿದ್ಧ, ಕೆಂಚ ಮುಂತಾದ ಹೆಸರಿಗೆ ಅಯ್ಯ, ಅಪ್ಪ, ಅಣ್ಣ ಅಂತ ಸೇರಿಸಿ ಮರ್ಯಾದೆ ಕೊಟ್ಟು ಕರೆಯುತ್ತಿದ್ದರು. ವಿಶೇಷ ಏನೂ ಅಂದರೆ ಅವರು ಸ್ವತಃ ಹಾಗೆ ಕರೆಯುತ್ತಿದ್ದದ್ದಲ್ಲದೆ, ಮಾನವ ಗೌರವವನ್ನು ಎತ್ತಿ ಹಿಡಿಯಬೇಕೂ ಅಂತ ಅಸೆಂಬ್ಲಿಯಲ್ಲೂ ಹೇಳುತ್ತಿದ್ದರು. ಚರ್ಚಾ ಸಮಯದಲ್ಲಿ ಅಂತಹ ಸಾಮಾಜಿಕ ಗೌರವ ಉಳಿಸಿಕೊಡುವ ಬಗ್ಗೆಯೂ ಮಲ್ಲಯ್ಯನವರು ಮಾತಾಡಿದ್ದಿದೆ.

◆ **ರಾಜಕೀಯವಾಗಿ ಮಲ್ಲಯ್ಯನವರ ಸ್ಥಾನಮಾನದ ಪರಿಚಯ ಮಾಡಿಕೊಡಿ.**

* ಮಲ್ಲಯ್ಯನವರು ಆ ಕಾಲಕ್ಕೆ ತುಂಬಾ ಪ್ರಭಾವಿ ವ್ಯಕ್ತಿ, ರಾಜಕೀಯವಾಗಿ, ಯಾಕೆಂದರೆ ಅವರು ದಿವಾನ್ ಮಿರ್ಜಾ ಸಾಹೇಬರಿಗೂ, ಮಹಾರಾಜರಿಗೂ ತುಂಬಾನೇ ಬೇಕಾದವರಾಗಿದ್ದರು. ಅವರ ಈ ನಿಕಟತೆ ಅವರಿಗೆ ಜನಪರ ಕೆಲಸಗಳನ್ನು ಮಾಡುವುದಕ್ಕೆ ಸಹಕಾರಿಯಾಗಿತ್ತು. ಮಾಡುತ್ತಾನೂ ಇದ್ದರು. ಆದ್ದರಿಂದ ಜನರಿಗೂ ತುಂಬಾ ಬೇಕಾದವರಾಗಿದ್ದರು.

**ಆದರೆ ಅದು ಸ್ವಾತಂತ್ರ್ಯ ಹೋರಾಟ ತೀವ್ರವಾಗಿದ್ದ ಸಂದರ್ಭ. ಊರಿಗೆ ಊರೇ ಅದರಲ್ಲಿ ತೊಡಗಿದ್ದಾಗ, ಮಲ್ಲಯ್ಯನವರು ಅದರಿಂದ ದೂರ ಉಳಿದಿದ್ದರ ಬಗ್ಗೆ ನಿಮ್ಮ ಅಭಿಪ್ರಾಯ ಏನು?**

* ಮಲ್ಲಯ್ಯನವರು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಅನುಸರಿಸುತ್ತಿದ್ದರು, ಮೆಚ್ಚುತ್ತಿದ್ದರು. ದಲಿತೋದ್ಧಾರ, ಶಿಕ್ಷಣ, ಪಾನ ನಿರೋಧ ಇವೆಲ್ಲ ಗಾಂಧೀತತ್ವಗಳೇ ಅಲ್ಲವೇ ತಾಯಿ? ಅದನ್ನೇ ಮಲ್ಲಯ್ಯನವರೂ ಪ್ರತಿಪಾದಿಸುತ್ತಿದ್ದರು. ಅದೇ ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಅವರು ಇಳಿಯದೇ ಇದ್ದುದಕ್ಕೆ ಕಾರಣಗಳೂ ಇವೆ.

ಒಂದು ಅವರ ಹಾಗೂ ಮಿರ್ಜಾ ಜೊತೆಗಿನ ಸ್ನೇಹ, ಇನ್ನೊಂದು ಕೃಷ್ಣರಾಜ ಒಡೆಯರ್ ಮೇಲಿದ್ದ ಗೌರವ. ಈ ಸ್ನೇಹ ಸಂಬಂಧವನ್ನು ಬಳಸಿಕೊಂಡೇ ಸಾರ್ವಜನಿಕ ಸೇವೆ ಮಾಡುತ್ತಿದ್ದ ಮಲ್ಲಯ್ಯನವರು ಚಳವಳಿ ತೀವ್ರಗೊಂಡಾಗಲೂ ಸ್ವಾಮಿ ನಿಷ್ಠೆ ಬದಲಿಸದೆ, ಕಾಂಗ್ರೆಸ್ಸೇತರ ಮಾರ್ಗದಲ್ಲಿ ತಮ್ಮ ಚಟುವಟಿಕೆಗಳನ್ನು ಮುಂದುವರೆಸಿದರು. ಜಿಲ್ಲೆಯ ಮತ್ತು ಸಂಸ್ಥಾನದ ಹಿತದೃಷ್ಟಿಯಿಂದ ತಾವು ಇಚ್ಛಿಸಿದ ಜನಪರ ಕೆಲಸಗಳೆಲ್ಲ ಸಲೀಸಾಗಿ ರಾಜರ ಮತ್ತು ದಿವಾನರ ಸಂಪರ್ಕದಿಂದ ಕೈಗೂಡುತ್ತಿದ್ದುದರಿಂದ ಪ್ರಭುತ್ವ ವಿರೋಧಿ ನೀತಿಯನ್ನವರು ಅನುಸರಿಸಬೇಕಾಗಿರಲಿಲ್ಲ. ಕಾಂಗ್ರೆಸ್ ಸೇರಲಿಲ್ಲ, ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಲಿಲ್ಲ ಎನ್ನುವುದಕ್ಕಿಂತ, ಆ ಕಾಲದಲ್ಲೇ ಅವರು ಅದರಿಂದ ಹೊರಗೆ ಉಳಿದೂ ಕಾಂಗ್ರೆಸ್ ರೂಪಿಸಿದ ರಚನಾತ್ಮಕ ಕಾರ್ಯಕ್ರಮಗಳ ಸಾಲಿನಲ್ಲೇ ಅವರೂ ಉಪಯುಕ್ತ ಸೇವೆ ಮಾಡಿದ್ದಾರಲ್ಲಾ. ಮಂಡ್ಯ ಜಿಲ್ಲೆಯಾಗಿದ್ದೂ, ಮದ್ದೂರಿಗೆ ನೀರಾವರಿ ಬಂದಿದ್ದೂ ಆವಾಗಲೇ ಅಲ್ಲವೇ? ಅವರೂ ಚಳವಳಿ ಸೇರಿದ್ದರೆ ಈ ಕೆಲಸವನ್ನೆಲ್ಲ ಬೇರೆ ಯಾರು ಮಾಡಬೇಕಾಗಿತ್ತು. ನನ್ನ ದೃಷ್ಟಿಯಲ್ಲಿ ಮಲ್ಲಯ್ಯನವರು ಕೈಗೊಂಡ ನಿಲುವು ಸರಿಯಾದದ್ದೇ.

**♦ ಗಾಂಧೀಜಿಯವರ ಗ್ರಾಮೋದ್ಧಾರದ ಕನಸನ್ನೇ ಮಲ್ಲಯ್ಯನವರೂ ಕಂಡರು. ಇದನ್ನೆಲ್ಲ ಕಣ್ಣಾರೆ ಕಂಡ ನೀವು ಹೇಗೆ ಬಣ್ಣಿಸಬಹುದು?**

♦ ಹಳ್ಳಿ ಜನರಿಗೆ ಪ್ರೋತ್ಸಾಹ ನೀಡಬೇಕು ಇಲ್ಲದೆ ಇದ್ದರೆ ಅವರು ಮುಂದೆ ಬರೊಕ್ಕಾಗಲ್ಲ ಎಂದು ಮಲ್ಲಯ್ಯನವರು ಯಾವಾಗಲೂ ಹೇಳುತ್ತಿದ್ದರು. ಹಳ್ಳಿ ಜನರು ಮುಂದುವರೆಯುವಂತೆ ಮಾಡಲು ಶೈಕ್ಷಣಿಕ ಸೌಲಭ್ಯವನ್ನು ಹೆಚ್ಚಿಸುವಂತೆ, ಕೆರೆಗಳನ್ನು ಜೀರ್ಣೋದ್ಧಾರ ಮಾಡುವಂತೆ, ನೀರಾವರಿ ಸೌಲಭ್ಯಗಳನ್ನು ಅಧಿಕಗೊಳಿಸುವಂತೆ, ಕೃಷಿಕರಿಗೆ ಆಧುನಿಕ ಬೇಸಾಯ ಪದ್ಧತಿಯಲ್ಲಿ ತರಬೇತಿ ನೀಡುವಂತೆ, ಬೇಸಾಯ ಸಂಬಂಧ ರೋಗಗಳನ್ನು ತಡೆಗಟ್ಟುವಂತೆ, ಹಳ್ಳಿಗರ ಮೇಲಿನ ಕರಭಾರ ಇಳಿಸುವಂತೆ, ಒಂದೇ ಎರಡೇ ಹಳ್ಳಿಗರಿಗೆ ಇದರಿಂದ ಅನುಕೂಲವಾಗುತ್ತದೆ ಅನಿಸಿದರೆ ಅದನ್ನೆಲ್ಲ ಒದಗಿಸುವಂತೆ ಸರ್ಕಾರವನ್ನು ಒತ್ತಾಯಿಸುತ್ತಿದ್ದ ಪ್ರಮುಖ ಹಾಗೂ ಪ್ರಭಾವೀ ನಾಯಕರು ಮಲ್ಲಯ್ಯನವರು, ಗ್ರಾಮೀಣವಾಗಿ ಹಿಂದುಳಿದವರು, ಜಾತೀಯವಾಗಿ ಹಿಂದುಳಿದವರು, ಆರ್ಥಿಕವಾಗಿ ದುರ್ಬಲರು, ದೀನರು ಸದಾ ಕಾಲವೂ ಮಲ್ಲಯ್ಯನವರ ಹೋರಾಟಕ್ಕೆ, ಸಾಮಾಜಿಕ ನಿಲುವಿಗೆ ಕಾರಣರಾದವರು. ಪ್ರಜಾಪ್ರತಿನಿಧಿ ಸಭೆಯ ಕಲಾಪಗಳಲ್ಲಿ ಅವರ ವಾದವನ್ನು ನೋಡಿದರೆ ಇವೆಲ್ಲ ವೇದ್ಯವಾಗುತ್ತದೆ.

ಇನ್ನು ನೀರಾವರಿ, ಆಗ ಮಂಡ್ಯದವರೆಗೇನೋ ನೀರಾವರಿಯಾಯಿತು. ಮದ್ದೂರಿಗೆ ನೀರಿರಲಿಲ್ಲ. ಮಲ್ಲಯ್ಯನವರ ಪ್ರಯತ್ನದ ಫಲವಾಗಿಯೇ ಮದ್ದೂರಿಗೆ ನೀರು ಉಣಿಸುವುದು

ಸಾಧ್ಯವಾಯಿತು. ತೈಲೂರು ಕೆರೆಗೂ ನೀರು ಬರುವ ಹಾಗೆ ಮಾಡಿದರು. ತೈಲೂರು ಕೆರೆಯಂತೆ ತುಂಬಾ ಕೆರೆಗೂ ನೀರು ಬರುವ ಹಾಗೆ ಮಾಡಿದರು. ತೈಲೂರು ಕೆರೆಯಂತೂ ತುಂಬಾ ದೊಡ್ಡ ಕೆರೆ. ವರ್ಷದ ಹನ್ನೆರಡು ತಿಂಗಳೂ ನೀರು ನಿಲ್ಲುವಂತಿತ್ತು. ಮಲ್ಲಯ್ಯನವರ ಶ್ರಮವಿರದೇ ಹೋಗಿದ್ದರೆ ಬರಡಾಗಿದ್ದ ಮದ್ದೂರಿನಲ್ಲಿ ಹಸಿರು ಚಿಮ್ಮುವುದು ಸಾಧ್ಯವಿತ್ತೇ? ಹಾಗೆ ಅವರ ಛಲವಿರದೆ ಹೋಗಿದ್ದರೆ ಆಗಲೇ ಮಂಡ್ಯ ಜಿಲ್ಲೆಯಾಗುತ್ತಿತ್ತೆ? ಅವರಿಗೆ ಸಲ್ಲಬೇಕಾದ ಕೀರ್ತಿಯನ್ನು ಅವರಿಗೇ ಕೊಡಬೇಕು.



# ಮಂಡ್ಯ ಜಿಲ್ಲೆಯ ರೂವಾರಿ

## ನಿಟ್ಟೂರು ಶ್ರೀನಿವಾಸರಾವ್

ನನಗೀಗ ನೆನಪುಗಳು ತೀರಾ ಸ್ಪಷ್ಟವಾಗಿಲ್ಲ. ಆದರೂ ನೆನಪಿನ ಕುಲುಮೆಯನ್ನು ಕೆದಕಿ ಕೆದಕಿ ಒಂದಿಷ್ಟು ಬೆಳಕು ಚೆಲ್ಲುವ ಯತ್ನ ಮಾಡುತ್ತೀನಿ. ಆಗ 1922–23 ಇರಬೇಕು. ಈಗಿನ ಲೆಜಿಸ್ಲೇಟಿವ್ ಅಸೆಂಬ್ಲಿ ಇದೆಯಲ್ಲ ಅದು ರೆಪ್ರೆಸೆಂಟೆಟಿವ್ ಅಸೆಂಬ್ಲಿ ಅಂತ ಇತ್ತು. ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ನಡೆಯೋದು. ಮಲ್ಲಯ್ಯನವರು ಆಗ ಇನ್ನೂ ತುಂಬಾ ಚಿಕ್ಕವರು. ಯುವಕರು. ಅವರು ಆಗ ತಾನೆ ಅಸೆಂಬ್ಲಿಯ ಸದಸ್ಯರಾಗಿದ್ದರು. ಎಂ.ಸಿ. ಲಿಂಗೇಗೌಡರು ಅಂತ ಇದ್ದರು. ಹೊಂಬೇಗೌಡರ ಹಿರಿಯ ಷಡ್ಡಕರು. ಮಲ್ಲಯ್ಯನವರು ಯಾವಾಗಲೂ ಅವರ ಜೊತೆಲೇ ಇರೋರು. ಲಿಂಗೇಗೌಡರ ಜೊತೆನೇ ಅಸೆಂಬ್ಲಿಗೆ ಬರೋರು. ನಾನೂ ಅಸೆಂಬ್ಲಿಗೆ ಹೋಗುತ್ತಿದ್ದದ್ದರಿಂದ ಅವರನ್ನು ಹತ್ತಿರದಿಂದ ನೋಡುತ್ತಿದ್ದೆ.

ಈ ಮೈಸೂರು ಪ್ರಜಾಪ್ರತಿನಿಧಿ ಸಭೆ ಅನ್ನೋದು ಸಂಸ್ಥಾನಗಳ ಮಟ್ಟದಲ್ಲಿ ಅತಿ ಮುಖ್ಯವಾದ ಪ್ರಾತಿನಿಧಿಕ ಸಂಸ್ಥೆ. ಪ್ರಜೆಗಳು ಏನಾದರೂ ಮನವಿ ಮಾಡಿಕೊಳ್ಳುವುದಿದ್ದರೆ ಆ ಕೂಟದ ಮೂಲಕ ಮಾಡಿಕೊಳ್ಳಬೇಕಿತ್ತು. ಯಾವ ಪ್ರತಿನಿಧಿ ಹೇಗೆ ಮತ್ತು ಎಂತಹ ಮನವಿ ಮಂಡಿಸುತ್ತಾರೆ, ಅದನ್ನು ಹೇಗೆ ಸಮರ್ಥಿಸಿಕೊಳ್ಳುತ್ತಾರೆ, ಅದರ ಆಧಾರದ ಮೇಲೆ ಕೆಲಸಗಳಾಗುತ್ತಿದ್ದವು. ಸಾಧಾರಣವಾಗಿ ಹೆಚ್ಚು ಬಹುಮತದೊಂದಿಗೇ ಪ್ರಜಾಪ್ರತಿನಿಧಿ ಸಭೆಗೆ ಆರಿಸಿ ಬರುತ್ತಿದ್ದ ಮಲ್ಲಯ್ಯನವರು ದಿಟ್ಟ ಮಾತುಗಾರರಾಗಿದ್ದರೂ ಒರಟು ಮಾತುಗಾರಿಕೆ ಇರಲಿಲ್ಲ. ಪ್ರಜಾಪ್ರತಿನಿಧಿ ಸಭಾದಲ್ಲಿ ಹೆಚ್ಚು ಕಾಳಜಿಯಿಂದ ಜವಾಬ್ದಾರಿಯಿಂದ ಕಾರ್ಯನಿರ್ವಹಿಸಿದ ಆರೆಂಟು ಮಂದಿಯನ್ನು ಕೌನ್ಸಿಲ್ ಗೂ ಆಯ್ಕೆ ಮಾಡುವ ಪದ್ಧತಿಯಿತ್ತು. ಹಾಗೆ ಅಸೆಂಬ್ಲಿ – ಕೌನ್ಸಿಲ್ ಸದಸ್ಯರಾಗಿ ಕಾರ್ಯ ನಿರ್ವಹಿಸಿದ ಹೆಗ್ಗಳಿಕೆ ಮಲ್ಲಯ್ಯನವರದಾಗಿತ್ತು. ಹೀಗೆ ಎರಡೂ ಸದನಗಳಲ್ಲಿ ಏಕಕಾಲಕ್ಕೆ ಸದಸ್ಯತ್ವ ಹೊಂದಿ ಅತ್ಯಂತ ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸಿದವರು ಅವರು.

ಮಲ್ಲಯ್ಯನವರು ಅತಿ ಮುಖ್ಯವಾಗಿ ಹೋರಾಡಿದ್ದು ಹಿಂದುಳಿದ ವರ್ಗದವರ ಸ್ಥಾನ ಮಾನಗಳನ್ನು ಎತ್ತಿ ಹಿಡಿಯುವುದಕ್ಕೆ. ಅಂದು ಶೇಕಡ ಎಂಭತ್ತು ಭಾಗ ಸಕಲ ಸೌಲಭ್ಯಗಳು ಮೇಲ್ವರ್ಗದವರಿಗೆ ಅದರಲ್ಲೂ ಬ್ರಾಹ್ಮಣರಿಗೆ ದೊರಕುತ್ತಿದೆ ಎಂಬ ಕೂಗಿತ್ತು. ಈ ಸೌಲಭ್ಯಗಳು ಇತರರಿಗೂ ದೊರಕಬೇಕು, ಜಾತೀವಾರು ಪ್ರಾತಿನಿಧ್ಯ ಸಿಗುವಂತಾಗಬೇಕು ಎಲ್ಲ ಜಾತಿ ಜನರಿಗೂ ಉದ್ಯೋಗಗಳು ಮೀಸಲಾಗಬೇಕು ಎಂದು ಇತರ ಹಲವಾರು ಸದಸ್ಯರಂತೆ ಮಲ್ಲಯ್ಯನವರೂ ಆಶಿಸಿದರು, ಆಗ್ರಹಿಸಿದರು. ಬ್ರಾಹ್ಮಣರನೇಕರು ಆ ಕಾಲದಲ್ಲಿ ಅದನ್ನೆಲ್ಲ ವಿರೋಧಿಸಿರಬಹುದು. ಆದರೆ ಸಾಮಾಜಿಕ ನ್ಯಾಯವನ್ನು ಗಮನಿಸಿದರೆ ಆ ಕಾಲದಲ್ಲೇ ನಡೆದ ಆ ಹೋರಾಟ ಅತ್ಯಂತ ಮಹತ್ವದ ಹೆಜ್ಜೆ ಎಂದು ನಾನು ಭಾವಿಸುತ್ತೇನೆ.

ಮಲ್ಲಯ್ಯನವರು ಶಿಕ್ಷಣ ಕ್ಷೇತ್ರಕ್ಕೆ ನೀಡಿರುವ ಆದ್ಯತೆಯನ್ನು ಗಮನಿಸಬೇಕು. ಅದರಲ್ಲೂ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಒತ್ತಾಸೆ ನೀಡಬೇಕೆಂಬುದು ಅವರ ಕಳಕಳಿಯಾಗಿತ್ತು. ಸ್ವತಃ ತಮ್ಮ ಹೆಣ್ಣು ಮಕ್ಕಳಿಗೂ ತಕ್ಕ ವಿದ್ಯಾಭ್ಯಾಸ ಕೊಡಿಸಿದರು. ಆಗ ನಮ್ಮ ಸಂಸ್ಥಾನದಲ್ಲಿ ಶಾಲೆಗಳ ಕೊರತೆಯಿತ್ತು. ಮಿಡಲ್ ಸ್ಕೂಲ್, ಹೈಸ್ಕೂಲ್ ಮಟ್ಟದ ಶಾಲೆಗಳು ಇಡೀ ರಾಜ್ಯಕ್ಕೆ ಒಂದೈವತ್ತು ಆರವತ್ತು ಇದ್ದರೆ ಹೆಚ್ಚು. ಮಲ್ಲಯ್ಯನವರು ಮಾಡಿದ ಪ್ರಯತ್ನದಿಂದ ತಾಲ್ಲೂಕಿಗೇ ಹತ್ತಿಪ್ಪತ್ತು ಸ್ಕೂಲ್ಗಳು ಬಂದವು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ವ್ಯವಸ್ಥೆ ನಮ್ಮಲ್ಲಿ ಸದೃಢವಾಗುವುದಕ್ಕೆ ಆ ಕಾಲಕ್ಕೇ ಮಲ್ಲಯ್ಯನವರು ಹರಿಸಿದ ಚಿಂತನೆ ಇದೆಯಲ್ಲ ಅದೇ ಮುಖ್ಯ ಕಾರಣ. ಈ ಚಿಂತನ ಧಾರೆಯನ್ನು ಅವರು ಅಸೆಂಬ್ಲಿಯಲ್ಲಿ ಮಾಡಿರುವ ಭಾಷಣ, ಚರ್ಚೆಗಳಲ್ಲಿ ನಿವೀಗಲೂ ಗಮನಿಸಬಹುದು.

ನಾನು ಗುರುತಿಸಿದ ಹಾಗೆ ಮಲ್ಲಯ್ಯನವರ ಮುಖ್ಯ ಕಾರ್ಯ ಕ್ಷೇತ್ರ ಮಂಡ್ಯ ಜಿಲ್ಲೆ. ಅದನ್ನೊಂದು ಜಿಲ್ಲೆಯಾಗಿ ರೂಪುಗೊಳಿಸಲು ಅವರು ಮಾಡಿದ ಪ್ರಯತ್ನವೇ ಜಯ ದೊರಕಿಸಿಕೊಟ್ಟದ್ದು. ಸರಿ, ಮಂಡ್ಯ ಜಿಲ್ಲೆ ಅವರ ಕಾರ್ಯಕ್ಷೇತ್ರವಾಗಿತ್ತು ಅಂತ ಹೇಳಿದೆನಲ್ಲ. ಆದರೆ ಅವರ ಚಿಂತನೆಗಳು ಸೀಮಿತ ವ್ಯಾಪ್ತಿಯವಾಗಿರಲಿಲ್ಲ. ಶಿವನ ಸಮುದ್ರದಲ್ಲಿ ವಿದ್ಯುತ್ ಉತ್ಪಾದನಾ ಕೇಂದ್ರ ಮಾಡಿಸುವಾಗ ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ ಮತ್ತಿತರ ಗಣ್ಯರ ಜೊತೆ ಯೋಜನೆಯನ್ನು ಅರ್ಥ ಮಾಡಿಕೊಂಡ ಸಹಮತ ತೋರಿದರಲ್ಲ ಮಲ್ಲಯ್ಯನವರು, ಅದರ ಪ್ರಯೋಜನ KGF ಚಿನ್ನದ ಗಣಿಗೂ ಆಯ್ತು, ಬೆಂಗಳೂರಿಗೂ ಬೆಳಕು ತಂದಿತು. ಅದೇ ರೀತಿ ಭದ್ರಾವತಿ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ. ಇದೂ ಸಹ ಅದರ ಅಧ್ಯಕ್ಷರಾಗಿದ್ದ ಸರ್ ಎಂ.ವಿ.ಯವರ ಮಾನಸ ಶಿಶುವೇ ಆಗಿದ್ದರೂ, ಅದಕ್ಕೆ ಉತ್ತೇಜನ ಕೊಡಲು, ಅದನ್ನರ್ಥೈಸಿಕೊಂಡು ಬೆಂಬಲ ನೀಡಲು ಪ್ರಜಾಪ್ರತಿನಿಧಿ ಸಭೆಯೂ ಮುಂದೆ ಬರಬೇಕಾಗಿತ್ತಲ್ಲ, ಅದೆಲ್ಲ ಸಾಧ್ಯವಾಗುತ್ತಿದ್ದದ್ದು ಮಲ್ಲಯ್ಯನವರಂಥ ಮುತ್ಸದ್ದಿಗಳಿದ್ದುದರಿಂದಲೇ. ಮಲ್ಲಯ್ಯನವರದಂತೂ ಸಂಪೂರ್ಣ ಪ್ರಗತಿಪರ ಧೋರಣೆ. ತಮ್ಮ ಪ್ರಗತಿ ಪರ ಚಿಂತನೆಗಳನ್ನು ಸಾಕಾರಗೊಳಿಸಿಕೊಳ್ಳಲು ಅವರು ಬಳಸಿಕೊಂಡದ್ದು, ಅತ್ಯಂತ ಆಪ್ತರಾದ ದಿವಾನ್ ಮಿರ್ಜಾರನ್ನು ಸಂಪೂರ್ಣ ಬೆಂಬಲ ದೊರಕಿದ್ದು ದಿವಾನ್ ಮಿರ್ಜಾರಿಂದಲೇ.

ಹಾಂ. ಈ ಸಂದರ್ಭದಲ್ಲಿ ನಾನು ಮಿರ್ಜಾ – ಮಲ್ಲಯ್ಯ ಸ್ನೇಹದ ಬಗ್ಗೆ ಹೇಳಲೇಬೇಕು. ಆಗಿನ ದಿವಾನರು ಅಂದರೆ ಈಗಿನ ಮುಖ್ಯಮಂತ್ರಿ ಇದ್ದ ಹಾಗೆ. ಪ್ರಜಾಪ್ರತಿನಿಧಿ ಸಭಾ ಸದಸ್ಯರೆಂದರೆ ಈಗಿನ ಎಮ್ಮೆಲ್ಲೇ ಇದ್ದ ಹಾಗೆ. ಮುಖ್ಯಮಂತ್ರಿ – ಶಾಸಕರ ನಡುವೆ ರಾಜಕೀಯ ಸ್ನೇಹ ವಿಶ್ವಾಸಗಳಿರುತ್ತವೆಯಾದರೂ, ಮಿರ್ಜಾ – ಮಲ್ಲಯ್ಯನವರ ಬಾಂಧವ್ಯ ಅಷ್ಟಕ್ಕೇ ಸೀಮಿತವಾಗಿರಲಿಲ್ಲ.

ಮಿರ್ಜಾರನ್ನು ಕಂಡರೆ ಮಲ್ಲಯ್ಯನವರಿಗೆ ಅತೀವ ಗೌರವ, ಮಲ್ಲಯ್ಯನವರನ್ನು ಕಂಡರೆ ದಿವಾನರಿಗೆ ಅತೀವ ಪ್ರೀತಿ. ಒಬ್ಬ ಸಾಮಾನ್ಯ ಸಭಾ ಸದಸ್ಯರ ಮನೆಗೇ ದಿವಾನರು ಹೋಗಿ ಬರುವಷ್ಟು ಆಳವಾಗಿತ್ತು. ಅವರ ಸ್ನೇಹ. ಈ ಸ್ನೇಹವನ್ನು ಮಲ್ಲಯ್ಯನವರು ಜನಪರ ಕೆಲಸಗಳಿಗಾಗಿಯೇ ಬಳಸಿಕೊಂಡರು. ಅವರು ಮನಸ್ಸು ಮಾಡಿದ್ದರೆ ಸ್ವತಃ ತಾವೇ ಮಂತ್ರಿಯಾಗುವ ಸರ್ವಶಕ್ತಿ ಅವರಲ್ಲಿತ್ತು. ಉತ್ತಮ ವಾಗ್ಪಟುತ್ವ, ನಿಷ್ಠಾನ್ವಿತ ಸಾರ್ವಜನಿಕ ಸೇವೆ, ಪ್ರಭುಗಳ ಪ್ರೀತಿ. ಸುದೀರ್ಘ ಅನುಭವ ಏನಿರಲಿಲ್ಲ ಮಲ್ಲಯ್ಯನವರಲ್ಲಿ. ಆದರೆ ವಶೀಲಿ ಮೂಲಕ ಅವರು ಪ್ರಭುಗಳ ವಿಶ್ವಾಸವನ್ನು ಎಂದೂ ಸ್ವಾರ್ಥ ಸಾಧನೆಗೆ ಬಳಸಿಕೊಳ್ಳಲೇ ಇಲ್ಲ.

ಅಪ್ಪಟ ಗಾಂಧೀತತ್ವದ ಅನುಯಾಯಿ ಅಂತ ಮಲ್ಲಯ್ಯನವರನ್ನು ಗುರುತಿಸಬಹುದಾದ್ದು ಎರಡು ಮುಖ್ಯ ನೆಲೆಗಳಲ್ಲಿ. ಮೂಲತಃ ಅವರು ಗಾಂಧೀ ಮಾರ್ಗಕ್ಕಿಳಿದು ಸ್ವಾತಂತ್ರ್ಯ ಸಂಗ್ರಾಮ ಸೇರಿದವರಲ್ಲ. ಅವರು ಹಾಗೆ ಚಳವಳಿಗೆ ಸೇರಲಿಲ್ಲ ಎಂದೂ ಆಕ್ಷೇಪ, ಆರೋಪ, ಅಪವಾದ ಎಲ್ಲಾ ಬರುತ್ತಿದ್ದವು. ಹೋರಾಟಕ್ಕೆ ಸೇರುವುದು ಬಿಡುವುದೂ ಅವರವರಿಗೇ ಸೇರಿದ ವಿಷಯವೂ ಆಗಿತ್ತು. ಅದಕ್ಕೆ ಅವರಲ್ಲಿ ನೂರು ಕಾರಣವೂ ಇದ್ದಿರಬಹುದು. ಅದೇನೇ ಇರಲಿ ಕಾಂಗ್ರೆಸ್ ಸೇರಲಿಲ್ಲ ಎಂದಾಕ್ಷಣ ಅವರು ಗಾಂಧೀ ನಿಷ್ಠರಲ್ಲ ಎಂದು ಹೇಳುವುದು ಸಾಧ್ಯವಿಲ್ಲ. ಸ್ವಾತಂತ್ರ್ಯದ ಯುದ್ಧ ಬಿಟ್ಟು ಉಳಿದ ಸಾಮಾಜಿಕ ಕ್ಷೇತ್ರಗಳಿವೆಯಲ್ಲ ಅಲ್ಲಿ ಗಾಂಧೀಜಿ ಯಾವ ಹೋರಾಟ ನಡೆಸಿದ್ದರು ಅವನ್ನು ಮಲ್ಲಯ್ಯನವರೂ ತಮ್ಮ ಕ್ಷೇತ್ರ ವ್ಯಾಪ್ತಿಯಲ್ಲಿ ಮಾಡುತ್ತಿದ್ದರು. ಎರಡು ಮುಖ್ಯ ನೆಲೆಗಳಲ್ಲಿ ಎಂದೆನಲ್ಲ, ಒಂದು ಹರಿಜನೋದ್ಧಾರ ಇನ್ನೊಂದು ಪಾನ ನಿರೋಧ. ಇವರೆಡೂ ಗಾಂಧೀ ಮಾರ್ಗಗಳೇ ಅಲ್ಲವೇ? ಗಾಂಧೀಜಿ ಮೈಸೂರಿಗೆ ಬಂದಿದ್ದರಲ್ಲ (ಇಸವಿ ನೆನಪಿಗೆ ಬರುತ್ತಿಲ್ಲ), ಆಗ ಮಲ್ಲಯ್ಯನವರು ಮಾಡಿದ್ದ ಹರಿಜನ ಸೇವೆಯನ್ನು ಖುದ್ದಾಗಿ ಹೋಗಿ ನೋಡಿ ಹೋಗಿದ್ದರು. ಹೀಗೆ ಕಾಂಗ್ರೆಸ್ ಹೊರಗಿನ ಗಾಂಧೀಜಿ ಹಾಗೂ ಕಾಂಗ್ರೆಸ್ ಹೊರಗಿನ ಮಲ್ಲಯ್ಯ ಬೇರೆಯೇ ಕಾರ್ಯ ಕ್ಷೇತ್ರಗಳಲ್ಲಿ ಏಕಮುಖತೆಯನ್ನು ಹೊಂದಿದ್ದರು.

ನೀರಾವರಿ ಕ್ಷೇತ್ರದಲ್ಲಿ ಮಲ್ಲಯ್ಯನವರು ಮಾಡಿದ ಸೇವೆಯನ್ನು ನಾವು ಮರೆಯುವಂತಿಲ್ಲ. ಈವತ್ತು ಮಂಡ್ಯ ಜಿಲ್ಲೆ ಸಂಪೂರ್ಣ ನೀರಾವರಿ ಪ್ರದೇಶ ಎಂದು ಘೋಷಿತವಾಗಿದ್ದರೂ, ಆವತ್ತು ಮದ್ದೂರಿನ ಸುತ್ತಮುತ್ತಲ ಹಳ್ಳಿಗಳು ನೀರನ್ನೇ ಕಂಡಿರಲಿಲ್ಲ. ಅಡವಾಗಿ ಶಿಂಷಾ ನದಿ ಬೇರೆ, ಆಗಲ್ಲಿನ ಪ್ರದೇಶದಲ್ಲೆಲ್ಲ ಮಳೆಯಾಧರಿಸಿಯೇ ಬೆಳೆ ತೆಗೆಯಬೇಕಾಗಿತ್ತು. ಕೃಷಿಕರ ಕಷ್ಟ ಕಂಡು ಮರುಗಿದ ಮಲ್ಲಯ್ಯನವರು ಆ ಪ್ರದೇಶ ನೀರಾವರಿಗೊಳ್ಳುವಂತೆ ಕೆರೆಕಟ್ಟೆಗಳು ಶುದ್ಧಗೊಳ್ಳುವಂತೆ ಪ್ರಯತ್ನಿಸಿದರು,

ಯಶಸ್ಸಿಯೂ ಅದರು. ಅಷ್ಟೇಕೆ ಮೈಸೂರು ಜಿಲ್ಲೆಗೆ ಸೇರಿದ್ದ ಮಂಡ್ಯವನ್ನೇ ಒಂದು ಸ್ವತಂತ್ರ ಜಿಲ್ಲೆಯಾಗಿ ಬೇರ್ಪಡಿಸಿದ ಕೀರ್ತಿಯೂ ಅವರಿಗೆ ಸಲ್ಲಬೇಕು.

ಅಂಥಾ ಮಹಾನ್ ವ್ಯಕ್ತಿಯ ಮಗ ಕೃಷ್ಣ ಅವರು ನಮ್ಮ ಮುಖ್ಯಮಂತ್ರಿ ಅನ್ನೋದು ತುಂಬಾ ಸಂತಸದ, ಹೆಮ್ಮೆ ಪಡುವ ವಿಷಯ. ಬಹಳ ಹಿಂದೆ ಅವರನ್ನು ನೋಡಿದ್ದ ನೆನಪು ಸ್ವಲ್ಪ ಸ್ವಲ್ಪ ಇದೆ. 50ನೇ ಇಸವೀಂತ ಕಾಣತ್ತೆ. ಆಗವರು ಕಾನೂನು ವಿದ್ಯಾರ್ಥಿ. ಅವರೇ ಮೊದಲನೇ ವಿದ್ಯಾರ್ಥಿ ಇರಬೇಕು. ವಿದ್ಯಾಭ್ಯಾಸ ಎಲ್ಲಾ ಮುಗಿದ ಮೇಲೆ ರೇಣುಕಾಚಾರ್ಯ ಕಾನೂನು ಕಾಲೇಜಿನಲ್ಲಿ ಉಪನ್ಯಾಸಕರೂ ಆಗಿದ್ದರು. ತುಂಬಾ ಚೆನ್ನಾಗಿದ್ದರು, ಮೇಧಾವಿ, ಜನತೆಯ ಸೇವೆ ಮಾಡುತ್ತಿದ್ದಾರೆ.



# ಕಷ್ಟ ಸುಖ ಸಮನಾಗಿ ಕಂಡ ಮಲ್ಲಯ್ಯನವರು

ಡಾ॥ ಅರ್ಜುನಪುರಿ ಅಪ್ಪಾಜಿಗೌಡ

ಸೋಮನಹಳ್ಳಿ ಚಿಕ್ಕೇಗೌಡ ಮಲ್ಲಯ್ಯನವರು 19ನೇ ಶತಮಾನದ ಅರುಣೋದಯದ ಸಂದರ್ಭದಲ್ಲಿ ಸ್ವಾತಂತ್ರ್ಯ ಪೂರ್ವಕ್ಕೆ ಜಿಲ್ಲೆಯಲ್ಲಿ ವಿಶೇಷತಃ ಮದ್ದೂರು ತಾಲ್ಲೂಕಿನಲ್ಲಿ ಸಂಮೃದ್ಧವಾಗಿ ಜನಪರ ಕೆಲಸ ಮಾಡಿದ ಮಹನೀಯರು. ಮಲ್ಲಯ್ಯನವರು ನೆನಪು ಜನಮನದಲ್ಲಿ ಇಂದಿಗೂ ಹಚ್ಚ ಹಸುರಾಗಿದೆ. ಅವರ ಹೆಸರು ಇಂದಿನ ಜನರ ಗಮನಕ್ಕೆ ಬರಲು ಅವರ ಮಗ ಶ್ರೀ ಎಸ್.ಎಂ. ಕೃಷ್ಣ ಅವರು ರಾಜ್ಯದ ಮುಖ್ಯಮಂತ್ರಿ ಆಗಬೇಕಾಯಿತು ! ತಾಲ್ಲೂಕಿನ ಅಭಿವೃದ್ಧಿಗೆ ದುಡಿದ ಅನೇಕ ಮಹನೀಯರು ನೆನಪಿನಿಂದ ಜಾರಿ ಹೋಗುತ್ತಿದ್ದಾರೆ ಎಂಬುದಕ್ಕೆ ಇದೊಂದು ನಿದರ್ಶನವಷ್ಟೇ !

1922ರಲ್ಲಿ ತಮ್ಮ 23ನೇ ವಯಸ್ಸಿಗೆ ಪ್ರಜಾ ಪ್ರತಿನಿಧಿ ಸಭೆಗೆ ಆಯ್ಕೆಯಾದ ಮಲ್ಲಯ್ಯನವರು 1947ರವರೆಗೆ 23 ವರ್ಷ ನಿರಂತರವಾಗಿ ಸದಸ್ಯರಾಗಿ ಜಿಲ್ಲೆಯ ಅಭಿವೃದ್ಧಿಗೆ ಶ್ರಮಿಸಿದರು. ಮೈಸೂರು ಮಹಾರಾಜರ, ದಿವಾನರ ಆಪ್ತರಾಗಿದ್ದುಕೊಂಡು ಮೈಸೂರು ಕಾಂಗ್ರೆಸ್ಸಿನ ಸ್ವಾತಂತ್ರ್ಯ ಹೋರಾಟ, ನಂಬಿದ್ದ ಮೌಲ್ಯಗಳಿಗೆ ಜೋತುಬಿದ್ದು. ನಂಬಿದ್ದವರನ್ನ ಕೈ ಬಿಡದೆ ಜನಪರ ಅಭಿವೃದ್ಧಿಗೆ ಪ್ರಾಮಾಣಿಕವಾಗಿ ದುಡಿದವರು.

ಕೋಮುವಾದವನ್ನು ವಿರೋಧಿಸುತ್ತಿದ್ದ ಮಲ್ಲಯ್ಯನವರು ಜಾತ್ಯಾತೀತ ಸ್ವಭಾವದವರಾದರೂ ಶೂದ್ರರನ್ನು ಕಂಡರೆ, ಬ್ರಾಹ್ಮಣೇತರರನ್ನು ಕಂಡರೆ ಕರಗುತ್ತಿದ್ದರು. ಶತಶತಮಾನದಿಂದ ವಿದ್ಯೆ ತಿಳುವಳಿಕೆ ಇಲ್ಲದೆ ನೊಂದಿದ್ದರೆ ಸಹಾನುಭೂತಿಯಿಂದ ಮೀಸಲಾತಿಗೆ ಹೋರಾಟ ಮಾಡಿದವರು.

ರಾಷ್ಟ್ರೀಯ ಕಾಂಗ್ರೆಸ್ಸಿಗೂ ಮೈಸೂರು ಕಾಂಗ್ರೆಸ್ಸಿಗೂ ಸ್ವಾತಂತ್ರ್ಯಗಳಿಗೆ ಹೋರಾಟದಲ್ಲಿ ಸಮಾನತೆ ಇದ್ದರೂ ಸ್ಥಳೀಯವಾದ, ಪ್ರಾದೇಶಿಕ, ಕೌಟುಂಬಿಕ, ವ್ಯಕ್ತಿಗತ ರಾಜಕೀಯ ಮೈಸೂರು ಕಾಂಗ್ರೆಸ್ಸಿಗರಲ್ಲಿದ್ದು, ಮದ್ದೂರಿನಲ್ಲಿ ಬೇರುಬಿಟ್ಟಿತ್ತು. ಹತ್ತು ಮಕ್ಕಳ ತಂದೆಯಾಗಿದ್ದ ಮಲ್ಲಯ್ಯನವರದು ತುಂಬು ಸಂಸಾರವಾಗಿದ್ದು 'ನೆಂಟಸ್ತಿಕೆ' ಯ ಮೂಲಕ ತಾಲ್ಲೂಕಿನ ಮುಂಚೂಣಿ ಹಳ್ಳಿಗಳಲ್ಲಿ ವಿಶೇಷ 'ಹಿಡಿತ' ಇಟ್ಟುಕೊಂಡಿದ್ದರು.

ಸ್ವಾತಂತ್ರ್ಯ ಹೋರಾಟದ ಕಾವು ಏರಿದಂತೆ ಶಾಲೆ ಓದುತ್ತಿದ್ದ ಪಡ್ಡೆ ಹೈಕಳು ಓದುವುದು ಬಿಟ್ಟು ಹೋರಾಟಕ್ಕೆ ಇಳಿದರು. ಹಳ್ಳಿ ಹಳ್ಳಿಯಲ್ಲಿ ಕಾಂಗ್ರೆಸ್ ಪ್ರಚಾರ ನಡೆಯತೊಡಗಿದಾಗ ಸಾದೊಳಲು, ಗೆಜ್ಜಲಗೆರೆ, ವಳಗೆರೆಹಳ್ಳಿ, ಕೂಣಸಾಲೆ, ಬಿದರಕೋಟೆ, ಕೊಪ್ಪ ಮುಂತಾದ ಗ್ರಾಮಗಳಲ್ಲಿ ಕಾಂಗ್ರೆಸ್ ಕಾರ್ಯಕರ್ತರಿಗೆ ನೀರು ನೀಡದ ಸ್ಥಿತಿ ನಿರ್ಮಾಣವಾಗಿತ್ತು" ಸೋಮನಹಳ್ಳಿ ಮಲ್ಲಪ್ಪನವರಿಗೆ ಗೊತ್ತಾದರೆ ಬಿಟ್ಟಾರೆಯೆ ?" ಎಂಬ ಬಂಧುಗಳು ಎಲ್ಲ ಹಳ್ಳಿಗಳಲ್ಲಿ ಇದ್ದರು. ಹಳ್ಳಿಗಳಿಗೆ ತೆರಳಿದ ಕಾಂಗ್ರೆಸ್ ಕಾರ್ಯಕರ್ತರು ಕಡ್ಲೆಪುರಿ ಹಣ್ಣು ತಿಂದು ನೀರು ಕುಡಿದು ನ ಾಡುವ ವಾತಾವರಣವಿತ್ತು.

1938ರಲ್ಲಿ ಗಾಂಧೀಜಿ ಬೆಂಗಳೂರಿನಿಂದ ಮೈಸೂರಿಗೆ ಹೋಗುವಾಗ ಮಲ್ಲಯ್ಯನವರ ಮೇಲ್ವಿಚಾರಣೆಯಲ್ಲಿದ್ದ ವಿದ್ಯಾರ್ಥಿ ನಿಲಯಕ್ಕೆ ಭೇಟಿ ಕೊಟ್ಟರು. ಹರಿಜನ ವಿದ್ಯಾರ್ಥಿಗಳೂ ಇರುವುದನ್ನು ಕಂಡು ಅತಿ ಹರ್ಷಪಟ್ಟು ಗಾಂಧೀಜಿ ನನ್ನ ಕನಸು ಇಲ್ಲಿ ನನಸಾಗಿದೆ, ಮಹಾರಾಜರ ಆಳ್ವಿಕೆಯಲ್ಲಿ ಪ್ರಜಾಪ್ರಭುತ್ವ ನೆಲೆಗೊಂಡಿದೆ." ಎಂದು ಉದ್ಗರಿಸಿದರಂತೆ.

ಕೆರೆಕಟ್ಟೆ ಕಾಲುವೆ ನಿರ್ಮಾಣ, ತಗ್ಗಲು ಆಣೆಯಿಂದ ಎಡದಂಡೆ ನಾಲೆಗೆ ಶಿಂಷಾ ನದಿಯಿಂದ ನೀರು ಸರಬರಾಜು. ಶಿವಪುರದಲ್ಲಿ ಪಶುವೈದ್ಯಕೀಯ ಚಿಕಿತ್ಸಾ ಕೇಂದ್ರದ ಸ್ಥಾಪನೆ, ಸೋಮನಹಳ್ಳಿಯಲ್ಲಿ ವಿದ್ಯಾರ್ಥಿ ನಿಲಯ ಸ್ಥಾಪನೆ ಇವರಿಂದಲೇ ಆಯಿತು ಎನ್ನುತ್ತಾರೆ ಹಿರಿಯರು.

ಪ್ರಜಾಸೋಷಲಿಸ್ಟ್ ಪಕ್ಷದ ನೇತಾರರಾಗಿದ್ದುಕೊಂಡು ಮಹಾರಾಜರು ದಿವಾನರ ಆಪ್ತವಲಯದಲ್ಲಿ ಒಬ್ಬರಾಗಿದ್ದ ಮಲ್ಲಯ್ಯನವರಿಗೆ ಕಾಂಗ್ರೆಸ್ ಹೋರಾಟದ ಮುಂಚೂಣಿ ನಾಯಕರಿಂದ, ಪಡ್ಡೆ ಹುಡುಗರ ಉತ್ಸಾಹದ ಕಿರಿಕಿರಿ ಸಾಕಷ್ಟು ಪ್ರಮಾಣದದಲ್ಲಿಯೇ ಹಿಂಸೆ ನೀಡಿರಬೇಕು. ವಿರೋಧಿ ಜನ ನೀಡಿದ ಕಿರುಕುಳವನ್ನು ಸ್ಥಿತಪ್ರಜ್ಞರಂತೆ ಅನುಭವಿಸಿದ ಮಲ್ಲಯ್ಯನವರು ತಮ್ಮನ್ನು ನಂಬಿದ್ದ ಜನರಿಗೆ ದೊರೆಯಿಂದ ದೊರೆಯಬಹುದಾದ ಎಲ್ಲಾ ರೀತಿಯ ಅಭಿವೃದ್ಧಿ ಕಾಮಗಾರಿಗಳನ್ನು ನಿಮಿತ್ತವಾಗಿ ಮಾಡಿಸಿದ್ದು ಸಾಧಾರಣ ಸಂಗತಿಯಲ್ಲ.

ಎಸ್.ಸಿ. ಮಲ್ಲಯ್ಯ ನವರ ಕೆಲಸ ಕಾರ್ಯಗಳಿಗೆ ಅಗೋಚರ ಶಕ್ತಿಯ ಬೆಂಬಲವಿತ್ತು. ಎಂಬುದಕ್ಕೆ ಒಂದು ನಿದರ್ಶನ. ಪ್ರಜಾ ಸೋಷವಿಸ್ಟ್ ಪಕ್ಷದಿಂದ ಜಿಲ್ಲಾ ಬೋರ್ಡ್ ಚುನಾವಣೆಗೆ ಮಲ್ಲಯ್ಯನವರು ನಿಂತಿದ್ದು ಸೋತರು. ಕಾಂಗ್ರೆಸ್ ಪಕ್ಷದಿಂದ ಕುದರಗೂಡಿ ಮರಿಯಪ್ಪನವರು ಗೆದ್ದರು. ಮಲ್ಲಯ್ಯನವರ ಸೋಲು. ಮರಿಯಪ್ಪನವರಿಗೆ ಗೆಲುವು ವಿಧಿಗೆ ಒಪ್ಪಿತವಾಗಲಿಲ್ಲ ಎಂದು ಕಾಣುತ್ತದೆ. ಚುನಾವಣೆಯಲ್ಲಿ ವಿಜೇತರಾದ ಮರಿಯಪ್ಪನವರು ವಾರದೊಳಗೆ ಹೃದಯ ಘಾತದಿಂದ ಮೃತಪಟ್ಟರು. ಇವರ ಸಾವು, ಮಲ್ಲಯ್ಯನವರ ಪಾಲಿಗೆ ಗೆಲುವು ತಂದಿತು. ಚುನಾವಣಾ ಕಣದಲ್ಲಿದ್ದ ಸ್ಪರ್ಧಿಗಳ ಮತಗಳ ಆಧಾರದಲ್ಲಿ ಎರಡನೇ ಸ್ಥಾನದಲ್ಲಿದ್ದ ಮಲ್ಲಯ್ಯನವರನ್ನು ಜಿಲ್ಲಾ ಬೋರ್ಡ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ ಎಂದು ಘೋಷಿಸಲಾಯಿತು.

ಇರ್ವಿನ್ ನಾಲಾ ಚಳುವಳಿ ಪ್ರಾರಂಭವಾದಾಗ 10 ಸಹಸ್ರ ರೈತರ ಜಾಥಾವನ್ನು ಶಿಸ್ತಿನ ಮೂಲಕ ಬೆಂಗಳೂರು ಅಠಾರ ಕಛೇರಿಗೆ ಕರೆದೊಯ್ದು ವೀರಣ್ಣಗೌಡರು "ನಮ್ಮ ರೈತರಲ್ಲಿ ಯಾರೂ ನಾಯಕರಲ್ಲ. ನಾವೆಲ್ಲರೂ ನಾಯಕರೇ ಆಗಿರುವುದರಿಂದ ಕಚೇರಿಯೊಳಗೆ ಮುಖಂಡರೊಡನೆ ಮಾತನಾಡಲು ಸಾಧ್ಯವಿಲ್ಲ. ತಾವೇ ರೈತರ ಬಳಿಗೆ ಬರಬೇಕೆಂದು ವಿನಂತಿಸಿದಾಗ ದಿವಾನರು ರೈತರ ಬಳಿಗೇ ಬಂದು ಭಾಷಣ ಮಾಡಿ ಕಂದಾಯ ಮನ್ನಾ ಮಾಡುವುದಾಗಿ ಘೋಷಿಸಿದರು.

ಈ ಘಟನೆ ನಡೆದ ನಂತರ ಕಾಂಗ್ರೆಸ್ಸಿಗರ ಹುಮ್ಮಸ್ಸು ಗರಿಕೆದರಿತು. ಅಷ್ಟರಲ್ಲಾಗಲೇ ತೋಟದ ಮನೆ ಎಂ.ಎಚ್. ಚನ್ನೇಗೌಡರ ಮಗಳು ತಾಯಮ್ಮ ಬಾಲವಿಧವೆಯಾಗಿದ್ದು, ವೀರಣ್ಣಗೌಡರು ಶಾಸ್ತ್ರೋಕ್ತವಾಗಿ ಮದುವೆ ಆಗಿ ಸಾಮಾಜಿಕ ಕ್ರಾಂತಿಯನ್ನು ಉಂಟುಮಾಡಿದರು

ಎಚ್. ಕೆ. ವೀರಣ್ಣಗೌಡರ ವರ್ಚಸ್ಸು ವರ್ಧಿಸಿದಂತೆ ಮಲ್ಲಯ್ಯನವರ ಪಿಎಸ್‌ಪಿ ಪಕ್ಷ ಕ್ಷೀಣಿಸತೊಡಗಿತು. ಎಚ್.ಕೆ. ವೀರಣ್ಣಗೌಡರ ಹೆಂಡತಿ ಶ್ರೀಮತಿ ತಾಯಮ್ಮನವರ ಕುಟುಂಬಕ್ಕೆ ಎಸ್.ಸಿ. ಮಲ್ಲಯ್ಯನವರ ಮಗಳನ್ನು ನೋಡಿ ನೆಂಟಸ್ತಿಕೆ ಆಗಿದ್ದರೂ ರಾಜಕೀಯವಾಗಿ ಪರಸ್ಪರ ಭಿನ್ನ ಗುಂಪಿನಲ್ಲಿದ್ದು ಅಂತರಂಗದಲ್ಲಿ ಇರಿಸು ಮುರಿಸು ಇದ್ದೇ ಇತ್ತು.

ಎಸ್.ಸಿ. ಮಲ್ಲಯ್ಯನವರು ಹಾಲಿ ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ರವರ ತಂದೆ ಎಂದು ವೈಭವೀಕರಿಸುವ ಜನರು ಒತ್ತಟ್ಟಿಗಿರಲಿ, ಕೊಪ್ಪ ಆತನೂರು ಹೊನ್ನಾಲಗೆರೆ ಸುತ್ತಮುತ್ತಲ ಹತ್ತಾರು ಹಳ್ಳಿಗಳ ಹಿರಿಯರು ಇಂದಿಗೂ ಮಲ್ಲಯ್ಯನವರನ್ನು ತಂಪು ಹೊತ್ತಿನಲ್ಲಿ ನೆನೆಯಬೇಕೆಂದು ಗುಣಗಾನ ಮಾಡುತ್ತಾರೆ. ಎಸ್.ಸಿ. ಮಲ್ಲಯ್ಯನವರು ಬ್ರಿಟಿಷರ ವಿರುದ್ಧ ತಿರುಗಿ ಬೀಳುವ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡುವ ಆಸೆ ಇದ್ದರೂ ಅರಸೊತ್ತಿಗೆಗೆ ಜೋತು ಬಿದ್ದು ಜನಪರವಾಗಿ ಅಭಿವೃದ್ಧಿ ಕೆಲಸದಲ್ಲಿ ತೊಡಗಿಸಿಕೊಂಡಾಗಿನ 'ವಾತಾವರಣ'ದ ಹಿಂಸೆ, ಒಳ ನೋವು ಕಲ್ಪನಾತೀತವಾದರೂ. ಜನರ ಮನಸ್ಸಿನಲ್ಲಿ ನೆಲೆಯೂರಿರುವುದು ವಾಸ್ತವ ಸಂಗತಿಯಾಗಿದೆ.



# ನನ್ನ ತಂದೆಯೇ ನನ್ನ ರೋಲ್ ಮಾಡೆಲ್

ಎಸ್.ಎಂ.ಕೃಷ್ಣ

ನಮ್ಮದು ಗೌರವ ಆದರಗಳಿಗೆ ಪಾತ್ರವಾಗಿದ್ದ ಕುಟುಂಬ. ಮಲ್ಲಯ್ಯನವರು 1930-40-50 ರ ಕಾಲಘಟ್ಟದಲ್ಲಿ ಹಳೆಯ ಮೈಸೂರು ಸಂಸ್ಥಾನದಲ್ಲಿ ಅತ್ಯಂತ ಪ್ರಭಾವಿ ನಾಯಕರಾಗಿದ್ದರು. ಮೈಸೂರು ರಾಜರಿಗೆ ಅವರ ಬಗ್ಗೆ ಅಪಾರ ಗೌರವ ಮನ್ನಣೆಗಳಿದ್ದವು. ಆ ಕಾರಣದಿಂದಲೂ ದಿವಾನರುಗಳಿಗೆ ಮತ್ತು ಇತರೆ ಮಂತ್ರಿಗಳಿಗೆ ಮಲ್ಲಯ್ಯನವರ ಆದರ್ಶಗಳ ಬಗ್ಗೆ ಅಗಾಧ ಗೌರವ ಇತ್ತು. ಮಿರ್ಜಾ ಇಸ್ಮಾಯಿಲ್, ದಿವಾನ್ ಮಾಧವರಾಯರು ಅವರ ಆಪ್ತ ಸ್ನೇಹಿತರಾಗಿದ್ದರು. ಮಿರ್ಜಾರವರಿಗೆ ರೈತಾಪಿ ಜನಗಳ ಬಗ್ಗೆ ಗೌರವ ಉಂಟಾದುದೇ ಮಲ್ಲಯ್ಯನವರ ವಿನಯ, ಅನುಕಂಪದ ಪ್ರಭಾವದಿಂದ. ಗ್ರಾಮೀಣ ಮಕ್ಕಳ ವಿದ್ಯಾಭ್ಯಾಸ ಹಾಗೂ ಗ್ರಾಮೀಣ ಭಾಗದ ಜನರ ಆರೋಗ್ಯ ಅಲ್ಲದೇ ಗ್ರಾಮೀಣ ಭಾಗದ ನೀರಾವರಿ ಮಲ್ಲಯ್ಯನವರ ಪ್ರಮುಖ ಅಜೆಂಡಾ ಆಗಿತ್ತು. ದಿವಾನರುಗಳು ಮೈಸೂರಿಂದ ಬೆಂಗಳೂರಿಗೆ ಹೋಗುವಾಗಲೆಲ್ಲ ಸೋಮನಹಳ್ಳಿ ಒಂದು Mandatory Stop ಆಗಿತ್ತು. Railway Station Hotel ನ ಜಾಮೂನು, ಮಸಾಲೆದೋಸೆ ತಿನ್ನುವುದೆಂದರೆ ಅವರೆಲ್ಲರಿಗೂ ಪ್ರಿಯವಾಗಿತ್ತು. ಮುಖ್ಯವಾಗಿ ನಮ್ಮ ತಂದೆಯವರು ತೆರೆದಿದ್ದ ವಿದ್ಯಾರ್ಥಿನಿಲಯದಲ್ಲಿ ಈ ಉಪಹಾರಕೂಟಗಳು ನಡೆಯುತ್ತಿದ್ದವು. ಯಾರನ್ನೂ ನನ್ನ ತಂದೆಯವರು ದ್ವೇಷಿಸುತ್ತಿರಲಿಲ್ಲ. ನನಗೆ ತಿಳಿದಂತೆ ಹಲವಾರು ಮೈಸೂರು ಕಾಂಗ್ರೆಸ್ಸಿನ ನಾಯಕರು ಇವರಿಗೆ ಆಪ್ತರಾಗಿದ್ದರು.

ಮೈಸೂರು ಕಾಂಗ್ರೆಸ್ಸಿನ ಮೊದಲನೆ ಅಧ್ಯಕ್ಷ ಟಿ. ಸಿದ್ದಲಿಂಗಯ್ಯ ನವರಿಂದ ಕೆಂಗಲ್ ಹನುಮಂತಯ್ಯನವರೆವಿಗೂ ಅವರ ಬಾಂಧವ್ಯವಿತ್ತು. ಕೆಂಗಲ್ ಹನುಮಂತಯ್ಯನವರು ಸೋಮನಹಳ್ಳಿ ವಿದ್ಯಾರ್ಥಿ ನಿಲಯದಲ್ಲಿಯೇ ಅವರ ವಿದ್ಯಾಭ್ಯಾಸದ ಕಾಲದಲ್ಲಿ ಇರುತ್ತಿದ್ದರು. ಇದಕ್ಕೆ ಕಾರಣ ಜಸ್ಟೀಸ್ ಹೊಂಬೇಗೌಡ ಮತ್ತು ನನ್ನ ಭಾವ ವಿ.ಎಂ. ಲಿಂಗಯ್ಯ ನವರ ಒಡನಾಟ. ಜನರ ಮಧ್ಯೆ ಬಾಳುವುದೇ ತಂದೆಯವರು ಗುರಿಯಾಗಿತ್ತು. ಒಂದು ಗುಟ್ಟಿನ ವಿಷಯವೇನೆಂದರೆ ಮಂಡ್ಯಜಿಲ್ಲೆಯ ಮುಂಚೂಣಿ ನಾಯಕರಾಗಿ ನಂತರ ರೂಪುಗೊಂಡ ಜಿ. ಮಾದೇಗೌಡರು, ದಿ. ಮಂಚೇಗೌಡರು ಇವರೂ ಸೋಮನಹಳ್ಳಿ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳೇ ಆಗಿದ್ದರು. ಪಕ್ಷ ಪ್ರತಿಪಕ್ಷಗಳ ಬಗ್ಗೆ ಹೆಚ್ಚಿನ ಕಳಕಳಿ ಅವರಿಗೆ ಇರಲಿಲ್ಲ. ಗ್ರಾಮೀಣ ಭಾಗದ ಬೆಳವಣಿಗೆಯೇ ಅವರ ರಾಜಕೀಯ ಗುರಿ. ಅದೇ ಅವರ Focus ಮತ್ತು Destination.

ಅವರು ಕಾಂಗ್ರೆಸ್ ಸೇರಿದ್ದರೆ ಅಂದಿನ ಸರ್ಕಾರದ ಹಲವಾರು ನೀರಾವರಿ ಯೋಜನೆಗಳು ಬರುತ್ತಿರಲಿಲ್ಲವೇನೊ. ಕನ್ನಂಬಾಡಿಯಿಂದ ಬರುವ ಕಾಲುವೆ ಮಂಡ್ಯಕ್ಕೆ ಸೀಮಿತವಾಗಿತ್ತು. (Original Plan ಪ್ರಕಾರ) ಆದರೆ ಎಸ್.ಸಿ.ಮಲ್ಲಯ್ಯನವರು, ಎಂ.ಸಿ.ಲಿಂಗೇಗೌಡರು ಇವರುಗಳ ಪ್ರಭಾವದ ಕಾರಣ ಶಿಂಷಾ ಎಡದಂಡೆ ಮತ್ತು ಬಲದಂಡೆ ಕಾಲುವೆಗಳು ನಿರ್ಮಾಣವಾಗಿ ಮದ್ದೂರು ತಾಲ್ಲೂಕು ಮತ್ತು ಮಳವಳ್ಳಿ ತಾಲ್ಲೂಕುಗಳು ನೀರಾವರಿ ಸೌಕರ್ಯ ಪಡೆದವು.

ಮಂಡ್ಯ ಜಿಲ್ಲೆ ಮೈಸೂರು ಜಿಲ್ಲೆಯಿಂದ ಬೇರೆ ಆದುದು ಮತ್ತು ಮೈಸೂರು ಸಕ್ಕರೆ ಕಾರ್ಖಾನೆ ಆದುದಕ್ಕೆ ಅವರ ಪ್ರಯತ್ನ ಕಾರಣವಾಯಿತು. ಆ ತಲೆಮಾರಿನ ಜನಗಳಿಗೆ ಇವರ ಸೇವೆ ವರ್ಣಾನಾತೀತ.

ಮಂಡ್ಯ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ ವಿಶೇಷವಾಗಿ ಪ್ರಾಥಮಿಕ ಶಿಕ್ಷಣ, ಆರೋಗ್ಯ, ಪಶುವೈದ್ಯಕೀಯ, ಗ್ರಾಮಾಂತರ ರಸ್ತೆಗಳು ಅವರ ಆದ್ಯತೆ ಆಗಿದ್ದವು.

1952 ರ ಚುನಾವಣೆ ಸಮಯ ಸಾಹುಕಾರ್ ಚೆನ್ನಯ್ಯನವರು ಮಲ್ಲಯ್ಯನವರಿಗೆ ವಿಶೇಷ ಸಂದೇಶ ಕಳುಹಿಸಿದ್ದರು. ಅದೇನೆಂದರೆ ಮಂಡ್ಯ ಜಿಲ್ಲೆಯಿಂದ ಒಟ್ಟು ಐದು ಜನರು ಆರಿಸಲ್ಪಡಬೇಕಾಗಿತ್ತು. ಅದರಲ್ಲಿ ಒಂದನ್ನು ಮಲ್ಲಯ್ಯನವರಿಗೆ ಬಿಟ್ಟುಕೊಡಲು ಸಿದ್ಧರಾಗಿದ್ದರು. ಆದರೆ ಮಲ್ಲಯ್ಯನವರ ಪ್ರತಿಕ್ರಿಯೆ ಈಗಿನ ರಾಜಕಾರಣಿಗಳಿಗೆ ಆಶ್ಚರ್ಯತರುತ್ತದೆ. ಮರುಸಂದೇಶ ಕಳುಹಿಸಿ ತಾವು ಚುನಾವಣೆಯಿಂದ ಹಿಂತೆಗೆದು ಎಂ.ಸಿ.ಲಿಂಗೇಗೌಡರಿಗೆ ಆ ಅವಕಾಶ ನೀಡಿ ಎಂದು ತಿಳಿಸಿದರು. ಆದರೆ ಕಾಂಗ್ರೆಸ್ ಅದನ್ನು ಒಪ್ಪಲಿಲ್ಲ. ಸ್ನೇಹಕ್ಕೆ ಶರಣಾಗಿ ತಂದೆಯವರೇ ಚುನಾವಣೆಗೆ ನಿಂತರು. ಪರಾಭವ ಅನುಭವಿಸಿದರು.

ವೀರಣ್ಣಗೌಡರು ಅಗ್ರ ಪಂಕ್ತಿಯ ನಾಯಕರಾಗಿದ್ದರು. ತಂದೆಯವರ ಹತ್ತಿರದ ಸಂಬಂಧಿಯೂ ಆಗಿದ್ದರು. ಅವರು 1962 ರ ಚುನಾವಣೆಯಲ್ಲಿ ಸ್ಪರ್ಧಿಸಿದಾಗ ನಾನು ಅಮೇರಿಕಾದಿಂದ ಆಗತಾನೆ ಹಿಂತಿರುಗಿದ್ದೆ. ನಮ್ಮ ತಂದೆಯವರ ಪ್ರತಿಬಿಂಬವನ್ನು ಜನ ನನ್ನಲ್ಲಿ ಕಂಡರು. ಅದುವೇ ಆ ಗೆಲುವಿಗೇ ಕಾರಣವಾಯಿತು.

ಆ ಸೋಲಿನ ನಂತರ ವೀರಣ್ಣ ಗೌಡರ ಮತ್ತು ನಿಜಲಿಂಗಪ್ಪ ಅವರ ಮಧ್ಯೆ ದೊಡ್ಡ ಕಂದಕ ಪ್ರಾರಂಭವಾಯಿತು. ಮಂಡ್ಯ ಕಾಂಗ್ರೆಸ್ಸಿನಲ್ಲಿ ಹೊಸ ತಲೆಮಾರಿನ ನಾಯಕರು ಹುಟ್ಟಿದ್ದರು. ಕೆ.ವಿ.ಶಂಕರಗೌಡ, ಸಿಂಗಾರಿಗೌಡ, ಎಸ್.ಎಂ.ಲಿಂಗಪ್ಪ ಮುಂತಾದವರು. ಇವರಿಗೂ ವೀರಣ್ಣಗೌಡರಿಗೂ wave length ಸರಿಬರಲಿಲ್ಲ. ಆದುದರಿಂದ, 1967 ರಲ್ಲಿ ಕಾಂಗ್ರೆಸ್ ಬಿಟ್ಟು ಚುನಾವಣೆಗೆ ಕಿರುಗಾವಲ್‌ನಿಂದ ಸ್ಪರ್ಧಿಸಿ ಸೋತರು. ಅನಂತರ ಅವರ ಮತ್ತು ನನ್ನ ಸಖ್ಯ ಪ್ರಾರಂಭವಾಯಿತು. ನಾನು ಅವರು ಒಟ್ಟಿಗೆ ಚುನಾವಣೆ ಮಾಡುತ್ತಿದ್ದೆವು. ಕಾರಿನಲ್ಲಿ ನೂರಾರು ಊರುಗಳಿಗೆ ಭೇಟಿ ಕೊಟ್ಟೆವು.

ಅವರ ಮಾತುಗಳು "ಕೃಷ್ಣ ನಾನು ಇಪ್ಪತ್ತೈದು ವರ್ಷಗಳಲ್ಲಿ ಮಾಡಿದ ಹೆಸರನ್ನು ನೀನು ಐದೇ ವರ್ಷದಲ್ಲಿ ವಿಧಾನಸಭೆ ಮತ್ತು ಸಂಸತ್ತಿನಿಂದ ಗಳಿಸಿದ್ದೀ" ಎಂದು ನನ್ನನ್ನು ಹರಸಿದ್ದರು. ಅವರ ದೊಡ್ಡ ಗುಣಕ್ಕೆ ಈ ಮಾತುಗಳೇ ಸಾಕ್ಷಿ.

ಮಂಡ್ಯ ಜಿಲ್ಲೆ ಇಂದು ಶ್ರೀಮಂತವಾಗಿದ್ದರೆ ಅದಕ್ಕೆ ಹಲವಾರು ಕ್ಷೇತ್ರಗಳಲ್ಲಿ ಮಲ್ಲಯ್ಯನವರು ನೀಡಿರುವ ಕೊಡುಗೆಯೂ ಕಾರಣ. ನನ್ನ ತಂದೆಯವರ ಬಗ್ಗೆ ಈ ಕಾರಣಕ್ಕಾಗಿ ನನಗೆ ಹೆಮ್ಮೆ ಎನ್ನಿಸುತ್ತದೆ. ಅವರ ಕ್ರಿಯಾ ಶೀಲತೆಗೆ ನಾನೇ ಮಾರುಹೋಗಿದ್ದೇನೆ. ಅವರೇ ನನ್ನ ರೋಲ್ ಮಾಡೆಲ್. ನನ್ನ ಭಾಷಣಗಳ ಶೈಲಿ ಅವರ ಭಾಷಣಗಳ ಅಲ್ಪ ಪ್ರತಿಬಿಂಬ ಮಾತ್ರ.



## ಸಂತಾಪ ಸೂಚನೆ

ಮಧುಮೇಹಕ್ಕೆ ತುತ್ತಾಗಿ 1952ರ ಅಕ್ಟೋಬರ್ 5ನೇ ತಾರೀಖಿನ ಕರಾಳದಿನದಂದು ಮದ್ರಾಸಿನಲ್ಲಿ ಮಲ್ಲಯ್ಯನವರು ನಿಧನ ಹೊಂದಿದಾಗ ಮೈಸೂರು ರಾಜ್ಯ ಓರ್ವ ನುರಿತ ರಾಜಕೀಯ ಮುತ್ಸದ್ದಿಯನ್ನು ಕಳೆದುಕೊಂಡಿತು, ಮಂಡ್ಯ ಜಿಲ್ಲೆಯಂತೂ ತನ್ನ ಅಸ್ತಿತ್ವಕ್ಕೆ ಕಾರಣೀಭೂತರಾದ ಚೇತನವನ್ನು ಕಳೆದುಕೊಂಡು ಕಳೆಗುಂದಿತು, ಮದ್ದೂರಂತೂ ಊರಬೆಳಕೇ ಆರಿಹೋದಂತೆ ಕತ್ತಲಡರಿ ಹೋಯಿತು. ಮಲ್ಲಯ್ಯನವರ ನಿಧನಕ್ಕೆ ವಿಧಾನಮಂಡಲದ ಉಭಯ ಸದನಗಳೂ ಸಂತಾಪ ವ್ಯಕ್ತಪಡಿಸಿ ಆ ಸಾರ್ಥಕ ಆತ್ಮಕ್ಕೆ ಶ್ರದ್ಧಾಂಜಲಿ ಸಮರ್ಪಿಸಿದರು.

### ಸದನಗಳಲ್ಲಿ ಶ್ರದ್ಧಾಂಜಲಿ 20.10.1952

**ಶ್ರೀ ಕೆ.ಹನುಮಂತಯ್ಯ (ಸಭಾನಾಯಕರು)** – ಸ್ವಾಮಿ, ಈ ಸಭೆಯ ಪರವಾಗಿ ಎರಡು ಸಂತಾಪದ ವಿಷಯಗಳನ್ನು ಪ್ರಸ್ತಾಪಿಸಬೇಕೆಂದು ತಮ್ಮ ಮತ್ತು ಈ ಸಭೆಯ ಅನುಮತಿಯನ್ನು ಕೇಳುತ್ತಿದ್ದೇನೆ. ಈ ಶಾಸನ ಸಭೆ ಹೊಸದಾಗಿ ರಾಜ್ಯಾಂಗ ರಚನೆಯ ಪ್ರಕಾರ ಸ್ಥಾಪನೆಯಾಗಿದ್ದರೂ ಕೂಡ ಮೈಸೂರು ದೇಶದಲ್ಲಿ ಪ್ರಜಾಪ್ರತಿನಿಧಿ ಸಭೆ (ಈ ಸಭೆಯೇ ಸ್ವಲ್ಪ ಹೆಸರು ಬದಲಾವಣೆಯಾದದ್ದಾಗಿ) ಈ ದೇಶದ ಆಗುಹೋಗುಗಳನ್ನು ಪರಿಶೀಲಿಸುತ್ತಿತ್ತು. ಆದ್ದರಿಂದ ಶಾಸನ ಸಭೆಯಲ್ಲಿ ಈ ಸಭೆಯಲ್ಲೇ ಆಗಲಿ, ಅಥವಾ ಹಿಂದಿನ ಶಾಸನಸಭೆಗಳಲ್ಲೇ ಆಗಲಿ– ಸದಸ್ಯರಾಗಿದ್ದು ದೇಶ ಸೇವೆಮಾಡಿರತಕ್ಕಂಥವರ ವಿಷಯವನ್ನು ಪ್ರಸ್ತಾಪಿಸುವುದು ಸೂಕ್ತವಾಗಿದೆ. ಆ ರೀತಿಯಾಗಿ ಮಹತ್ತರವಾದ ದೇಶಸೇವೆಯನ್ನು ಮಾಡಿದ ಇಬ್ಬರು ಮಾಜಿ ಸದಸ್ಯರುಗಳು ದೈವಾಧೀನರಾಗಿದ್ದಾರೆ. ಮೊದಲು ಅವರೆಲ್ಲ ಒಬ್ಬರ ವಿಷಯವನ್ನು ಪ್ರಸ್ತಾಪಿಸಿ ಅನಂತರ ಇನ್ನೊಬ್ಬರ ವಿಷಯ ತೆಗೆದುಕೊಳ್ಳುತ್ತೇನೆ.

ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು ಸುಮಾರು ಕಾಲು ಶತಮಾನಗಳವರೆಗೂ ಡಿಸ್ಟ್ರಿಕ್ಟ್ ಬೋರ್ಡು ಪ್ರಜಾಪ್ರತಿನಿಧಿಸಭೆ,

ನ್ಯಾಯವಿಧಾಯಕಸಭೆ ಈ ತೆರವಾಗಿ ಸ್ಥಳೀಯ ಸಂಸ್ಥೆಗಳಲ್ಲೂ ಮತ್ತು ಶಾಸನಸಭೆಗಳಲ್ಲೂ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಹಾಗೆಯೇ ಗ್ರಾಮಾಂತರಗಳಲ್ಲಿನ ನಮ್ಮ ಜನರಿಗೆ ಇನ್ನೂ ನಾನಾ ವಿಧದಲ್ಲಿ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ರಾಜಕೀಯದಲ್ಲಿ ಬಹಳ ನುರಿತ, ಹೆಸರುವೆತ್ತ ಪ್ರಖ್ಯಾತ ವ್ಯಕ್ತಿಗಳಾಗಿದ್ದರು. ಮೈಸೂರು ದೇಶದ ಒಂದು ವೈಶಿಷ್ಟವೆಂದರೆ–ರಾಜಕೀಯದಲ್ಲಿ ಭಿನ್ನಾಭಿಪ್ರಾಯ ಅಲ್ಪಸ್ವಲ್ಪ ಇದ್ದಿದ್ದರೂ ಕೂಡ ಎಲ್ಲರೂ ಮಾಡುತ್ತಿರುವ ಕೆಲಸ ದೇಶಸೇವೆಯ ಕೆಲಸವೆಂದೂ, ಪರಸ್ಪರ ಸ್ನೇಹ, ಸೌಹಾರ್ದ, ಮಿತ್ರತ್ವ ಉಳಿಯಬೇಕು ಮತ್ತು ಬೆಳೆಯಬೇಕು ಎಂದೂ ಭಾವಿಸಿ ನಡೆದುಕೊಳ್ಳುವುದು. ಈ ಸತ್ಸಂಪ್ರದಾಯ ಸತತವಾಗಿ ಬೆಳೆದುಬಂದಿದೆ. ಶ್ರೀಮಾನ್ ಮಲ್ಲಯ್ಯನವರು ಇಂದು ಯಾವ ಪಕ್ಷ ಸರ್ಕಾರವನ್ನು ವಹಿಸಿಕೊಂಡಿದೆಯೋ ಆ ಪಕ್ಷಕ್ಕೆ ಪ್ರತಿಯಾದ ಪಕ್ಷಕ್ಕೆ ಸೇರಿದವರಾಗಿದ್ದರೂ ಮತ್ತು ಅನೇಕ ಸಂದರ್ಭಗಳಲ್ಲಿ ಅದರ ನಿಸ್ಪೃಹತ್ವದಲ್ಲಿ ಅವರ ದೇಶಸೇವಾ ಮನೋವೃತ್ತಿಯಲ್ಲಿ ಯಾವ ತರದ ಲೋಪವನ್ನು ಕಂಡುಹಿಡಿಯುವುದಕ್ಕೂ ಅವಕಾಶವಿಲ್ಲ. ನಿಸ್ಪೃಹರಾಗಿ ಅವರು ದೇಶಸೇವೆಯನ್ನು ಸಲ್ಲಿಸಿದ್ದಾರೆ. ಇಂಥ ಒಬ್ಬ ದೊಡ್ಡ ವ್ಯಕ್ತಿಯನ್ನು ನಾವು ಈ ದಿವಸ ಕಳೆದುಕೊಂಡಿರುವುದರಿಂದ ನಮ್ಮ ರಾಜಕೀಯದಲ್ಲೇ ಒಂದು ದೊಡ್ಡ ಕೊರತೆಯು ಕಾಣುವ ಹಾಗಾಗಿದೆ.

ದೇವರು ಅವರ ಆತ್ಮಕ್ಕೆ ಶಾಂತಿಯನ್ನು ಕೊಡಲೆಂದು ಹೇಳಿ ನಾನು ಈ ಸಭೆಯ ಪರವಾಗಿ ಪ್ರಾರ್ಥನೆ ಮಾಡುತ್ತೇನೆ.



## Sri J. Mohamed Imam

Jagalur

Sir, I fully associate myself with the sentiments expressed by the Leader of the House and I offer on behalf of the entire House, my sincere condolences to the members of the bereaved family. It is our duty, we cannot but help expressing our profound sorrow at the passing away of Sri S.C. Malliah at a comparatively early age. I first came to know him in the year 1928 when both of us were colleages in the Representative Assembly. Since that time I knew intimately the services he had been rendering to the State and to the people to Mysore in one capacity or another. He was practically one of the leaders of the State and he was many a time instrucmental in moulding the policies of the State. He had served as a member of the Legislative Assembly and he had served in more than one term as the President of the District Board. Not only in these capacities but also in various other capacities he had served the State, as mentioned by the Leader of the House, selflessly and without any selfish desire. So, I again offer after my sincere condolences on behalf of the House to the members of the late Sri S.C. Malliah. Our hearfelt sympathies may be conveyed to them.



## ಶ್ರೀ ಎಚ್.ಕೆ. ವೀರಣ್ಣಗೌಡ

ಮದ್ದೂರು

ಸ್ವಾಮೀ, ಈ ಸಭಾನಾಯಕರೂ ಮತ್ತು ಮಾನ್ಯ ಮಿತ್ರರಾದ ಶ್ರೀಮಾನ್ ಇಮಾಂರವರೂ ಹೇಳಿದ ಮಾತುಗಳನ್ನು ಅನುಮೋದಿಸುತ್ತಾ ನಾನೂ ಎರಡು ಮಾತುಗಳನ್ನು ಈ ಸಂದರ್ಭದಲ್ಲಿ ಹೇಳಲಿಚ್ಛಿಸುತ್ತೇನೆ. ಶ್ರೀಮಾನ್ ಮಲ್ಲಯ್ಯನವರು ಸುಮಾರು ಕಳೆದ 20 ವರ್ಷಗಳಿಂದ ನನ್ನ ರಾಜಕೀಯ ಪ್ರತಿಕಕ್ಷಿಗಳಾಗಿದ್ದರು. ಅನೇಕ ಚುನಾವಣೆಗಳಲ್ಲಿ ನನಗೂ ಅವರಿಗೂ ಪೈಪೋಟಿ ಬೀಳುತ್ತಿತ್ತು.

ಕೆಲವು ಸಂದರ್ಭಗಳಲ್ಲಿ ಅವರು ಜಯಗಳಿಸುತ್ತಿದ್ದರು, ಕೆಲವು ಸಂದರ್ಭಗಳಲ್ಲಿ ನಾನು ಜಯಗಳಿಸುತ್ತಿದ್ದರು, ಕೆಲವು ಸಂದರ್ಭಗಳಲ್ಲಿ ನಾನು ಜಯಗಳಿಸುತ್ತಿದ್ದೆ. ಇಷ್ಟಾದರೂ ಶ್ರೀಮಾನ್

ಮಲ್ಲಯ್ಯನವರ ವಿಷಯದಲ್ಲಿ ಅತ್ಯಂತ ಗೌರವ ಮತ್ತು ಪ್ರೀತಿವಿಶ್ವಾಸಗಳು ನನಗಿತ್ತು ಎಂದು ಈ ಸಭೆಯ ಮುಂದೆ ಹೇಳಲಿಚ್ಛಿಸುತ್ತೇನೆ. ಶ್ರೀಯುತರು ನನ್ನ ಬಂಧುಗಳು ಮಾತ್ರವಲ್ಲದೆ, ಸ್ನೇಹಿತರೂ ಆಗಿದ್ದರು ಸಾಮಾನ್ಯವಾಗಿ ಒಬ್ಬ ಮನುಷ್ಯ ಹುಟ್ಟಿದ ಮೇಲೆ ಅವನು ಸಾಯುವುದರೊಳಗಾಗಿ ತನ್ನ ಊರು, ತನ್ನ ತಾಲ್ಲೂಕು, ತನ್ನ ದೇಶ–ಇವುಗಳನ್ನು ತಾನು ಕಂಡದ್ದಕ್ಕಿಂತಲೂ ಒಂದು ಹೆಜ್ಜೆಯಷ್ಟಾದರೂ ಮುಂದಕ್ಕೆ ತಂದು ಅಭಿವೃದ್ಧಿ ಪಡಿಸಿದರೆ ಆತನ ಜನ್ಮ ಸಾರ್ಥಕವಾಯಿತೆಂದು ದೊಡ್ಡವರು ಹೇಳಿದ್ದಾರೆ. ಶ್ರೀಮಾನ್ ಮಲ್ಲಯ್ಯನವರ ವಿಚಾರದಲ್ಲಿ ಆ ಮಾತುಗಳು ಅಕ್ಷರಶಃ ನಿಜವೆಂದು ಹೇಳಬಹುದು. ಅವರು ಹುಟ್ಟಿದ ಸೋಮನಹಳ್ಳಿಯೆಂಬ ಸಣ್ಣ ಊರಿನ ಹೆಸರನ್ನು ಸಂಸ್ಥಾನದಲ್ಲೆಲ್ಲಾ ಬೆಳಗುವಂತೆ ಅವರು ಮಾಡಿದ್ದಾರೆ. ತಾಲ್ಲೂಕಿನವರಿಗೆ ಅವರು ಮಹದುಪಕಾರಮಾಡಿದ್ದಾರೆ. ಹಾಗೂ ಷಿಂಷಾ ನದಿಯ ಎಡಭಾಗದ ಪ್ರದೇಶದ ಜನರಿಗೆ ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರ ಪ್ರಯತ್ನದಿಂದ ಆಗಿರುವ ಉಪಕಾರವನ್ನು ಅಲ್ಲಿನ ಜನರು ತಲೆತಲಾಂತರದವರೆಗೂ ನೆನೆಸಿಕೊಳ್ಳುವಂಥದಾಗಿದೆ. ಡಿಸ್ಟ್ರಿಕ್ಟು ಬೋರ್ಡ್ ಪ್ರೆಸಿಡೆಂಟರಾಗಿಯೂ ಬೇರೆ ವಿದವಾದ ಪ್ರಾತಿನಿಧ್ಯ ಹೊಂದಿದವರಾಗಿಯೂ ಜವಾಬ್ದಾರಿ ಸ್ಥಾನಗಳನ್ನು ಅವರು ವಹಿಸಿದ್ದಾಗ ಅವರು ಅನೇಕ ರೀತಿಯಲ್ಲಿ ಜನರಿಗೆ ಸಹಾಯಮಾಡಿದ್ದಾರೆ. ವಿಶ್ವೇಶ್ವರಯ್ಯ ನಾಲಾ, ಕನ್ನಂಬಾಡಿ ಕಟ್ಟೆ ಕೆಳಗಿನ ರೈತರಿಗೆ ಬಹಳಮಟ್ಟಿಗೆ ಸೇವೆ ಸಲ್ಲಿಸಿದ್ದಾರೆ.

ಅದೇ ರೀತಿ, ಸಂಸ್ಥಾನಕ್ಕೂ ಕೂಡ ಸೇವೆ ಸಲ್ಲಿಸಿದ್ದಾರೆಂದರೆ ಅದು ಅತಿಶಯೋಕ್ತಿಯಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಹಳ್ಳಿಗಾಡಿನವರ ಸೌಕರ್ಯಕ್ಕಾಗಿ, ಅವರ ವಿದ್ಯಾಭ್ಯಾಸಕ್ಕೆ ಸ್ಕೂಲು ಮುಂತಾದುವುಗಳನ್ನು ಒದಗಿಸುವುದಕ್ಕಾಗಿ ಅವರು ಹಿಂದಿನ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳಲ್ಲಿ ಸರ್ಕಾರದವರೊಡನೆ ಹೋರಾಟ ಮಾಡಿ ಜನ ಸಾಮಾನ್ಯರಿಗೂ ಹಳ್ಳಿಗಾಡಿನವರಿಗೂ ಉಪಕಾರ ಮಾಡಿದ್ದಾರೆ. ದೇಶದ ಗಣ್ಯ ಪ್ರಜೆಯಾಗಿ ಪ್ರಮುಖ ಮುಖಂಡರಾಗಿ ಮತ್ತು ಜನರ ನಿಜವಾದ ಪ್ರತಿನಿಧಿಯೆನಿಸಿಕೊಂಡು ದೇಶ ಸೇವೆ ಮಾಡಿದಂಥ ಅವರು ಕಾಲಾಧೀನರಾದುದು ನಮಗೆ ಸಂತಾಪವನ್ನುಂಟುಮಾಡುತ್ತದೆ. ಆದ್ದರಿಂದ ಸಭಾ ನಾಯಕರೂ ಮತ್ತು ಶ್ರೀಮಾನ್ ಇಮಾಂರವರೂ ಹೇಳಿದ ಅಂಶಗಳನ್ನೇ ಅನುಮೋದಿಸುತ್ತಾ ಈ ಸಭೆಯ ಪರವಾಗಿ ಸಂತಾಪವನ್ನು ಅವರ ಸಂಸಾರದವರಿಗೆ ತಿಳಿಸಬೇಕೆಂದು ಆಶಿಸುತ್ತೇನೆ.



## ಶ್ರೀ ಎಂ. ಶಂಕರಲಿಂಗೇಗೌಡ

ನಾಗಮಂಗಲ

ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರ ವಿಚಾರವಾಗಿ ಮುಖ್ಯಮಂತ್ರಿಗಳಾದ ಶ್ರೀಮಾನ್ ಹನುಮಂತಯ್ಯನವರು ಮತ್ತು ವಿರೋಧ ಪಕ್ಷದ ನಾಯಕರಾದ ಇಮಾಂರವರೂ ಮತ್ತು ಇತರರೂ ಅವರು ಮಾಡಿದಂಥ ಕೆಲಸಗಳನ್ನು ವಿವರಿಸಿವರು. ಮತ್ತು ಶ್ರೀಮಾನ್ ವೀರಣ್ಣ ಗೌಡರು ಆ

ತಾಲ್ಲೂಕಿಗೆ ಅವರು ಎಷ್ಟರ ಮಟ್ಟಿಗೆ ಉಪಕಾರ ಮಾಡಿದ್ದಾರೆಂಬುದನ್ನು ಬಹಳ ಚೆನ್ನಾಗಿ ವಿವರಿಸಿದರು. ಮುಖ್ಯವಾಗಿ ಮನುಷ್ಯನ ಯೋಗ್ಯತೆ ಅವನು ಸತ್ತಾಗಲೇ ಗೊತ್ತಾಗುವುದು! ಪಾಪಿ ಸತ್ತರೆ ಒಂದು ತುಣಕೂ ಅತ್ತ ಕಡೆ ನೋಡುವುದಿಲ್ಲ. ಅದೇ ನೋಡಿ! ಮೊನ್ನೆ ದಿವಸ ನಾವು ಅಲ್ಲಿ ಹೋಗಿದ್ದಾಗ ಕೂತುಕೊಳ್ಳುವುದಕ್ಕೂ ಜಾಗವಿಲ್ಲದ ಹಾಗೆ ಜನ ಕಿಕ್ಕಿರಿದಿತ್ತು. ಅಷ್ಟು ಜನ ಸೇರಿದ್ದರು. ಕಂಟ್ರೋಲ್ ಇದ್ದರೆ ಅಷ್ಟು ಜನಕ್ಕೂ ಅನ್ನಹಾಕುವುದಕ್ಕಾಗುತ್ತಿರಲಿಲ್ಲ. ಸುಮಾರು ಇಪ್ಪತ್ತು ಪಲ್ಲ ಅಡಿಗೆ ಮಾಡಿದ್ದರು. 8000 ಜನಕ್ಕೆ ಕಡಮೆ ಇಲ್ಲದೆ ರಾತ್ರಿ ಎಂಟು ಗಂಟೆಯವರೆಗೂ ಊಟ ಮಾಡಿಕೊಂಡು ಹೋದರು. ನಾವೂ ಅವರಂತೆಯೇ ಸೇವೆ ಮಾಡಿ ಸತ್ತ ಕಾಲದಲ್ಲಿ ಅಷ್ಟು ಜನರು ಸೇರಿದರೆ ನಾವು ಸಂಬಳ ತೆಗೆದುಕೊಂಡದ್ದು ಸಾರ್ಥಕವಾಯಿತೆನ್ನ ಬಹುದು. ಇಲ್ಲದಿದ್ದರೆ ಸುಮ್ಮನೆ ಸರ್ಕಾರದ ಸಂಬಳದ ಹಣ ತೆಗೆದುಕೊಂಡು ತಿಂದುಬಿಟ್ಟರು ಎನ್ನ ಬೇಕಾಗುತ್ತದೆ. ಆದ್ದರಿಂದ ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರು ಮಾಡಿದಂಥ ಕಾರ್ಯಗಳನ್ನು ಮಾಡಿ ಒಳ್ಳೆಯ ಹೆಸರನ್ನು ಗಳಿಸಲೆಂದು ಎಲ್ಲರಿಗೂ ಹೇಳಿ. ಶ್ರೀಯುತರ ಆತ್ಮಕ್ಕೆ ಸೌಖ್ಯವುಂಟಾಗಲಿ ಎಂದು ದೇವರನ್ನು ಪ್ರಾರ್ಥನೆಮಾಡುತ್ತಾ ನಾನು ಮುಗಿಸುತ್ತೇನೆ.

## ಶ್ರೀ ಟಿ. ಮರಿಯಪ್ಪ

### ಮೈಸೂರು

ಮಾನ್ಯ ಅಧ್ಯಕ್ಷರೇ, ಸಭಾ ನಾಯಕರು ಮತ್ತು ಇತರ ಮಾನ್ಯ ಸದಸ್ಯರು ಶ್ರೀಮಾನ್ ಎಸ್.ಸಿ. ಮಲ್ಲಯ್ಯನವರ ನಿಧನದ ಬಗ್ಗೆ ಸಂತಾಪವನ್ನು ವ್ಯಕ್ತಪಡಿಸುತ್ತಾ ಅವರ ಗುಣಗಾನ ಮಾಡಿದ್ದಾರೆ. ಶ್ರೀಯುತರು ರಾಜಕೀಯ ಕ್ಷೇತ್ರದಲ್ಲಿ ವಿಶೇಷವಾದ ಸೇವೆ ಸಲ್ಲಿಸಿದ್ದಾರೆ. ಒಂದಾನೊಂದು ಕಾಲದಲ್ಲಿ ಅವರೂ ನಾವೂ ಒಂದೇ ಪಾರ್ಟಿಯಲ್ಲಿ ಕೆಲಸ ಮಾಡುತ್ತಿದ್ದು ಭಿನ್ನಾಭಿಪ್ರಾಯಗಳು ಬಂದು ಅವರು ವಿರೋಧ ಪಕ್ಷದಲ್ಲಿದ್ದರೂ ಕೂಡ, ಅವರು ಮಾಡುತ್ತಿದ್ದ ಭಾಷಣವನ್ನು ಈ ಸಭೆಯವರು ಅವಲೋಕಿಸಿದರೆ ಅದೆಷ್ಟು ಗಾಂಭೀರ್ಯದಿಂದ ಕೂಡಿತ್ತೆಂಬುದು ವ್ಯಕ್ತಪಡುತ್ತದೆ. ಸಾಮಾನ್ಯವಾಗಿ ಸಾರ್ವಜನಿಕ ಕೆಲಸಗಳಲ್ಲಿ ಅವರು ಹೆಚ್ಚಿನ ಆಸಕ್ತಿಯಿಂದ ಸೇವೆ ಸಲ್ಲಿಸಿದ್ದಾರೆಂಬುದು ಮಾನ್ಯ ಸದಸ್ಯರಿಗೆ ಗೊತ್ತೇ ಇದೆ. ಬಾಕಿ ಜನಾಂಗದ ಅಭಿವೃದ್ಧಿಯ ವಿಚಾರದಲ್ಲಿಯೂ ಅವರು ವಿಶೇಷವಾಗಿ ದುಡಿದಿದ್ದಾರೆ. ಹೀಗೆ ಸಾಮಾಜಿಕ ಮತ್ತು ರಾಜಕೀಯ ಎರಡು ಕ್ಷೇತ್ರಗಳಲ್ಲೂ ಅವರ ಸೇವೆಯನ್ನು ಎಲ್ಲರೂ ಸ್ಮರಿಸಿಕೊಳ್ಳುವಂತಿದೆಯೆಂದು ಹೇಳಿ ಮಾನ್ಯ ಸಭಾನಾಯಕರು ಸಭೆಯ ಮುಂದಿಟ್ಟಿರುವ ನಿರ್ಣಯವನ್ನು ಸಮರ್ಥಿಸುತ್ತೇನೆ.

**ಅಧ್ಯಕ್ಷರು**—ಈ ಸಭೆಯ ಸದಸ್ಯರಾಗಿದ್ದ ಶ್ರೀ ಎಸ್.ಸಿ. ಮಲ್ಲಯ್ಯನವರು ಕಳೆದ ಕಾಲು ಶತಮಾನಗಳಿಂದಲೂ ರಾಜಕೀಯ ರಂಗ, ಶಾಸನ ಸಭೆಗಳು ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿ

ಒಂದೇ ಸಮನೆ ದುಡಿದು ಮೈಸೂರು ಜನಾಂಗದಲ್ಲಿ ಪ್ರಖ್ಯಾತರಾಗಿದ್ದರು. ಶಾಸನ ಸಭೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಮೂಲಕ ಸಂಸ್ಥಾನದ ಮತ್ತು ಜನತೆಯ ಸೇವೆಯನ್ನು ಎಷ್ಟು ಕಷ್ಟಗಳು ಬಂದಾಗ್ಲೂ ಹೆದರದೆ ನಿರ್ಮಲವಾದ ಮನಸ್ಸಿನಿಂದ ಮಾಡಿದ್ದಾರೆಂಬುದು ಜನ ಜನಿತವಾಗಿದೆ. ಅದರಲ್ಲೂ ಸಂಸ್ಥಾನದಲ್ಲಿ ಅತ್ಯಧಿಕವಾಗಿ ಜನರು ವಾಸವಾಗಿರುವ ಗ್ರಾಮಾಂತರ ಪ್ರದೇಶಗಳಲ್ಲಿ ಅವರು ವಿಶೇಷ ಆಸಕ್ತಿಯುಳ್ಳವರಾಗಿದ್ದರು ಎಂಬುದು ಎಲ್ಲರಿಗೂ ತಿಳಿದಂಥ ವಿಷಯವಾಗಿದೆ. ಇಂಥ ಒಬ್ಬ ಮಹನೀಯರ ಅಕಾಲ ನಿಧಾನಕ್ಕಾಗಿ ಈ ಸಭೆಯು ತನ್ನ ಅನುತಾಪವನ್ನು ವ್ಯಕ್ತಪಡಿಸುತ್ತದೆ. ಈ ದುಃಖದಲ್ಲಿ ನಾನೂ ಭಾಗಿಯಾಗಿದ್ದೇನೆ.

ಈ ಸಂದರ್ಭದಲ್ಲಿ ಮೃತರ ಆತ್ಮಕ್ಕೆ ಗೌರವನ್ನು ಸೂಚಿಸಲು ಸಭೆಯು ಎದ್ದು ನಿಂತು ಎರಡು ನಿಮಿಷ ಕಾಲ ಮೌನದಿಂದಿರಬೇಕೆಂದು ಸೂಚಿಸುತ್ತೇನೆ.

**(ಸದಸ್ಯರೆಲ್ಲರೂ ಎದ್ದು ನಿಂತು, ಎರಡು ನಿಮಿಷಗಳ ಕಾಲ ಮೌನದಿಂದಿದ್ದು, ದಿವಂಗತರ ಆತ್ಮಕ್ಕೆ ಗೌರವವನ್ನು ಸೂಚಿಸಿದರು).**



## ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

### ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಸಂಧ್ಯಾರೆಡ್ಡಿ | 20.00 |

| | | | |
|---|---|---|---|
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಮಲ್ಲಿಕಾರ್ಜುನಕೂಡಲಗಿ | 30.00 |
| 32. | ಕಾಗೋಡು ಚಳವಳಿ | ಮಲ್ಲಿಕಾರ್ಜುನಕೂಡಲಗಿ | 15.00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ್ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |

| | | | |
|---|---|---|---|
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |

